ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರರು ದ್ವಿತೀಯ ಶಂಭುವೆನಿಸಿದರೆ, ಈ ಶತ[illegible] ದಲ್ಲಿ ಶರಣಬಸವೇಶ್ವರರು ದ್ವಿತೀಯ ಶಂಭುವೆನಿಸಿದ್ದಾರೆ. ತಮ್ಮ ಜೀವನದುದ್ದಕ್ಕೂ ದಾಸೋಹವನ್ನ ಗೈದ ಶರಣ ಬಸವ ಪರಂಪರೆಯ ಏಳನೆಯ ಮಹಾದಾಸೋಹ ಪೀಠಾಧಿಪತಿಗಳಾಗಿದ್ದ ಲಿಂಗೈಕ್ಯ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರು ದ್ವಿತೀಯ ಶರಣಬಸವೇಶ್ವರರೆಂಬ ಘನತೆಗೆ ಪಾತ್ರರಾದರು. ಈ ಮಹಾ ಪುರುಷರ ಅಂತಃಶಕ್ತಿಯ ದಿವ್ಯ ಕೃಪೆ ಹೊಂದಿ ಬೆಳಗುತ್ತಿರುವ ಶರಣಬಸವೇಶ್ವರ ಸಂಸ್ಥಾನದ ಈಗಿನ ಎಂಟನೆಯ ಮಹಾದಾಸೋಹ ಪೀಠಾಧಿಪತಿಗಳಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಅರವತ್ತು ಮೂರು ಪುರಾತನರು, ಬಸವಾದಿ ಪ್ರಮಥರು ಹಾಗೂ ಶರಣಬಸವೇಶ್ವರರು ಸರ್ವದರಲ್ಲಿ ದಾಸೋಹವೇ ಬೇಕೆಂದು ಪ್ರತಿಪಾದಿಸಿದ ದಾಸೋಹ ದರ್ಶನವನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದಲ್ಲದೆ ಅದನ್ನು ಪ್ರತಿಷ್ಠಾಪಿಸಿ ಪ್ರಚುರಪಡಿಸುತ್ತಿದ್ದಾರೆ ಈ ದಾಸೋಹ ತತ್ವಕ್ಕೆ ಪೂಜ್ಯ ಶ್ರೀ 'ಅಪ್ಪ' ಅವರ ಈ ದಾಸೋಹ ಸೂತ್ರ ನಿದರ್ಶನವಾಗಿದೆ.

ವೇದ ಶಾಸ್ತ್ರ ಆಗಮ ಗೀತ ಪುರಾಣಗಳ ಮರ್ಮವನರಿದ ಫಲ ದಾಸೋಹವಯ್ಯ
ಜಿನ ಬುದ್ಧ ಶಿಖ ನಿರಂಕಾರಿ ಧರ್ಮಗಳ ಮರ್ಮವನರಿದ ಫಲ ದಾಸೋಹವಯ್ಯ
ಕ್ರೈಸ್ತ ಇಸ್ಲಾಂ ಫಾರಸಿ ಧರ್ಮಗಳ ಮರ್ಮವನರಿದ ಫಲ ದಾಸೋಹವಯ್ಯ
ಪುರಾತನರು ಬಸವಾದಿ ಪ್ರಮಥರು ಶರಣಬಸವನ ಪರಂಪರೆಯವರು,
ವಚನವನೋದಿ ಪ್ರಸಂಗಾನುಭವದಲ್ಲಿದ್ದು ಅರಿದ ಫಲ ದಾಸೋಹವಯ್ಯ
'ಈಶಾವಾಸ್ಯಂ ಇದಂ ಜಗತ್ ಸರ್ವಂ' ಎಂಬುದಾಗಿ ಜಗವೆಲ್ಲ ದೇಗುಲವಾದಾಗ
ಜಗದಲ್ಲಿರುವ ಎಲ್ಲ ಧರ್ಮಗಳ ಮರ್ಮ ದಾಸೋಹವಯ್ಯ
ಅದುಕಾರಣ ಸರ್ವದರಲ್ಲಿ ದಾಸೋಹಬೇಕೆಂಬ ಸೂತ್ರ ವಿಶ್ವ ಧರ್ಮವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ತನಗಾಗಿ ಮಾಡುವುದು ಉಪಜೀವನ, ತನಗಾಗಿ ಅಷ್ಟೇ ಅಲ್ಲದೆ ಪರಹಿತಕ್ಕಾಗಿ ಮಾಡುವುದು ಒಳ್ಳೆಯ ಜೀವನ, ತನಗಾಗಿ ಅಷ್ಟೇ ಅಲ್ಲದೆ ಪರಹಿತ ಮಾಡುವಲ್ಲಿ ಪರಮಾತ್ಮನನ್ನು ಕಾಣುವುದು ದಾಸೋಹ ಜೀವನ, ಅದುವೇ ಮಹಾ ಜೀವನ ಎಂಬುದು ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರ ಈ ದಾಸೋಹ ಸೂತ್ರದಿಂದ ಸ್ಪಷ್ಟವಾಗುತ್ತದೆ.

ಗುರುಹಿರಿಯರೆಲ್ಲರೂ ಅನುಭಾವಿಗಳೆಲ್ಲರೂ ಹೇಳಿದರಯ್ಯ
ಶಾಸ್ತ್ರ ಪುರಾಣಗಳೆಲ್ಲವೂ ಸಾರಿದವಯ್ಯ
ಆತ್ಮನಲ್ಲಿಯೇ ಪರಮಾತ್ಮನಿಹನೆಂದರಯ್ಯ
ಇದರ ಅರ್ಥವ ಅನರ್ಥಮಾಡಿ ಬಾಯಿ ವೇದಾಂತವಾಗಿ ಅನುಭವ
ವೇದ್ಯವಾಗದೆ ಹೋಯಿತ್ತಯ್ಯ
ಆದರೆ ಬಸವಾದಿ ಪ್ರಮಥರು ಎಮಗೆ ತೋರಿದರಯ್ಯ ದಾಸೋಹ ಸೂತ್ರದಿ
ಕಬ್ಬಿನ ಮೇಲೆ ಜೇನಿಟ್ಟತ್ತೆಂಬರು
ಅವು ಒಂದರ ಸಿಹಿಯನೊಂದರಿಯವು
ಭಕ್ತ ಜಂಗಮದ ನಡುವೆ ಅರ್ಥ, ಪ್ರಾಣ, ಅಭಿಮಾನವೆಂಬ ಸಿಗುರು ಕಾಡಿತ್ತು
ಕಾಣಾ ಕೂಡಲಸಂಗಮದೇವ
ಈ ಅಹಂಕಾರವೆಂಬ ಸಿಗುರು ತೆಗೆಯಲು
ನಿರಹಂಕಾರದೊಳಗೆ ದಾಸೋಹ ಧರ್ಮವ ಕರುಣಿಸಿದರಯ್ಯ
ಲಿಂಗವಿದ್ದಲ್ಲಿ ಅಹಂಕಾರವಿಲ್ಲ ಅಂತೆಯೆ ಅವರು
ಅಹಂಕಾರ ನಿರಶನ ಮಾಡಲು ಹೇಳಿದರಲ್ಲದೆ ಪ್ರಪಂಚ ಬಿಡಲುಂಟೆ ?
ಅದುಕಾರಣ ಶಿರಿಯಾಳ ಚಂಗಳೆ, ಬಸವಾದಿ ಪ್ರಮಥರು,
ಶರಣಬಸವಾದಿ ಶರಣರು ಸತಿವಿಡುದು ನಿರ್ವಾಣ ಸತಿ ಕಂಡರಯ್ಯ
ಅದುಕಾರಣ ತಾನಿಲ್ಲದೆ ಮಾಡುವುದು ಕಾಯಕವಾಗಿ ಅಹಂಕಾರವ ಕೆಡಿಸಿತ್ತು

...ನಿಲ್ಲದೆ ನೀಡುವುದು ದಾಸೋಹವಾಗಿ ಅಹಂಕಾರವ ಬಿಡಿಸಿತ್ತು
ತಾನಿಲ್ಲದೆ ಭಕ್ತಿಯಿಂದ ಪಡೆವುದು ಸಹಜ ಪ್ರಸಾದವಾಗಿ ಪರಿಣಮಿಸಿತ್ತು
ಹೀಗೆ ತನ್ನ ಮರೆದು ನಿನ್ನ ಮೆರೆದಡೆ,
ತನ್ನಂತೆ ಮಾಡುವನೆಂಬುದು ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಜೀವಾತ್ಮ-ಪರಮಾತ್ಮ ಇವೆರಡರ ಮಧ್ಯ ಇರುವ ಅರ್ಥ, ಪ್ರಾಣ, ಅಭಿಮಾನವೆಂಬ ಶಿಬಿಕೆಯನ್ನು ತೆಗೆಯುವ ತಂತ್ರವೇ ತ್ರಿವಿಧ ದಾಸೋಹವಾಗಿದೆ.

ಶಿವಸಾಕ್ಷಾತ್ಕಾರ ಮಾಡಿಕೊಳ್ಳುವದಕ್ಕೆ ಎರಡು ಪ್ರಮುಖ ಮಾರ್ಗಗಳುಂಟು 'ಸೋಹಂ' ಎಂದರೆ ಶಿವನೇನಾನು ಎಂದು ಜ್ಞಾನ ಮಾರ್ಗದಿಂದ ಶಿವಸಾಕ್ಷಾತ್ಕಾರ ಪಡೆದರು ಶಂಕರಾಚಾರ್ಯ ಹಾಗೂ ಆ ಪೀಠ ಪರಂಪರೆಯವರು. ತನ್ನ ಮರೆದು ಭಕ್ತಿ ಮಾರ್ಗದಿಂದ ಶಿವನನ್ನು ಅರಿದು ದಾಸೋಹಂಭಾವದಿಂದ ಶಿವ ಸಾಕ್ಷಾತ್ಕಾರ ಹೊಂದಿದರು-ಪುರಾತನರು ಬಸವಾದಿ ಪ್ರಮಥರು ಶರಣಬಸವರು ಹಾಗೂ ಅವರ ಪೀಠಪರಂಪರೆಯವರು. 'ಈಶಾವಾಸ್ಯಮಿದಂ ಜಗತ್ಸರ್ವಂ' ಈಶ್ವರನು ವಿಶ್ವವ್ಯಾಪಿಯಾಗಿದ್ದಾನೆ. ಭೂಮಿಯ ಒಳಭಾಗದಲ್ಲಿ ಎಲ್ಲೆಡೆ ನೀರಿದ್ದರೂ ಭೂಮಿಯನ್ನು ಕೊರೆದು ನೀರು ತೆಗೆಯಬೇಕಾದಂತೆ ಈಶ್ವರ ಎಲ್ಲೆಡೆ ಇದ್ದರೂ ಕೂಡ ಆತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಅನೇಕ ವಿಧಿ ವಿಧಾನಗಳಿರುವಂತೆ ದಾಸೋಹ ಮಾರ್ಗವೂ ಒಂದು ಪ್ರಮುಖ ಮಾರ್ಗವಾಗಿದೆ. 'ಜಂಗಮಮುಖದಲ್ಲಿ ಲಿಂಗವನರಸಿಕೊ ಎಂದಡೆ ದಾಸೋಹವೆಂಬ ಪಸರವನಿಕ್ಕಿದನು' ಈ ತತ್ವವು ಆಚರಣೆಯಲ್ಲಿ ಬಂದು ಧರ್ಮರೂಪದಲ್ಲಿ ಬೆರೆತು ಸಂಸ್ಕೃತಿ ರೂಪವನ್ನು ಕೂಡಿಕೊಂಡು ಶರಣಬಸವ ಪರಂಪರೆಯು ಎಂಟು ತಲೆಮಾರಿನುದ್ದಕ್ಕೂ ನಿರಂತರವಾಗಿ ಉಳಿದುಕೊಂಡು ಬೆಳೆದುಕೊಂಡು ಬಂದಿರುವುದು ಶ್ರೀ ಶರಣಬಸವೇಶ್ವರ ಮಹಾದಾಸೋಹ ಪೀಠದ ವೈಶಿಷ್ಟ್ಯವಾಗಿದೆ, ಯತ್ರ ಜೀವಃ ತತ್ರ ಶಿವಃ ಎನ್ನುವಂತೆ ಸಕಲ ಜೀವಾತ್ಮರ ಚೈತನ್ಯದ ಮುಖಾಂತರ ಪರಮಾತ್ಮನನ್ನು ಕಾಣುವುದು ಈ ಪೀಠ ಪರಂಪರೆಯಲ್ಲಿ ನಡೆದು ಬಂದು ವಿಶಿಷ್ಟ ಸಂಸ್ಕೃತಿಯಾಗಿದೆ. ಈ ಸಂಸ್ಕೃತಿ ಕರ್ನಾಟಕ ಭಾರತದಲ್ಲಿ ಅಷ್ಟೇ ಏಕೆ ವಿಶ್ವದಲ್ಲಿಯೇ ಏಕೈಕವಾಗಿದ್ದು ಮತ್ತೆಲ್ಲಿಯೂ ಕಂಡುಬರುತ್ತಿಲ್ಲ

ಮೂರ್ತಿಯಲ್ಲೇನಿದೆಯೆಂದು ಬಯಲಿನಲ್ಲಿಯೇ ಪ್ರಾರ್ಥನೆಗೈದರಯ್ಯ
ಬಯಲಿನಲ್ಲೇನಿದೆಯೆಂದು ಆಲಯಮಾಡಿಕೊಂಡು ಮೂರ್ತಿಯನ್ನು ಆರೋಪಿಸಿ ಪೂಜಿಸಿದರಯ್ಯ
ನೀನು ಸಾಕಾರ-ನಿರಾಕಾರ ಎರಡೂ ಮೂರ್ತಿಯಾಗಿರ್ಪೆಯಯ್ಯ
ನೀನು ಸಾಕಾರ-ನಿರಾಕಾರ ಮೂರ್ತಿ ಧರಿಸಿರ್ಪೆಯಾಗಿ
ಆಕಾರದಲ್ಲಿ ನಿರಾಕಾರ ನಿಂತ ಅರಿವು ಜಂಗಮವಾಗಿ ಪೂಜೆಗೊಳ್ಳುತ್ತಿರುವುದಯ್ಯ
ನಿರಾಕಾರ ಆಕಾರದಲ್ಲಿ ನಿಂದು ಪೂಜೆಗೊಳ್ಳುತ್ತಿರುವುದೇ ಜಂಗಮಲಿಂಗವಯ್ಯ
ಅದಕ್ಕಾಗಿ ಎಮ್ಮ ಬಸವಾದಿ ಪ್ರಮಥರು ಜಂಗಮ ಮುಖಾಂತರ ಲಿಂಗವನರಸಿಕೊಂಡು
ದಾಸೋಹಗೈವುದೇ ಪೂಜೆಗಳಲ್ಲಿ ಶ್ರೇಷ್ಠ ಪೂಜೆಯೆಂದರಯ್ಯ
ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಇದ್ದವನು ಇಲ್ಲದವನಿಗೆ ಕೊಡುತ್ತಾನೆಂಬ ಭಾವನೆಯೇ ದಾನ. ಇಲ್ಲಿ ಕೊಡುವವನ ಕೈ ಮೇಲಿದ್ದು ಪಡೆಯುವವನ ಕೈ ಕೆಳಗಿರುವುದು. ಉಳ್ಳವನು ಕೊಡುತ್ತಾನೆಂಬ ಭಾವನೆ ದಾನದಲ್ಲಿ ಒಡಮೂಡಿ ಬರುತ್ತದೆ. ಕೊಡುವವ ಭಕ್ತ, ಪಡೆಯುವವ ಜಂಗಮನೆಂಬ ಭಾವನೆಯಿಂದ 'ದಾತಾ ಭುಕ್ತಾ ಸ್ವಯಂ ಶಿವಃ' ಎಂಬುದೇ ದಾಸೋಹ ಭಾವನೆ. ಹೇಗೆಂದರೆ ಊಟ ಮಾಡಿಸುವುದು ಕೈ, ಉಣ್ಣುವುದು ಬಾಯಿ, ಕೈ-ಬಾಯಿ ಇವೆರಡೂ ಒಂದೇ ದೇಹದ ಅಂಗಗಳು. ಅದರಂತೆ ಮಾಡುವ ಮಾಡಿಸಿಕೊಳ್ಳುವ ದೇವರು ಒಬ್ಬನೆ. ಈ ಸದ್ಭಾವನೆಯೇ ದಾಸೋಹ. ಇಲ್ಲಿ ಕೊಡುವವನು ಪಡೆಯುವವನು ಹೇಗೆ ಸಾಕ್ಷಾತ್ ಶಿವನಾಗಿರುತ್ತಾನೆಯೋ ಜನನ ಮರಣ ಈ

ರಡೂ ಅವಸ್ಥೆಯಲ್ಲಿ ಶಿವಸ್ವರೂಪನೇ ಆಗಿರುತ್ತಾನೆ ದಾಸೋಹಿ. ಈ ಸಿದ್ಧ
ಮಹಾದಾಸೋಹ ಶೀರದ ಏಳು ತಲೆಮಾರಿನಿಂದ ಮುಂದುವರಿದಿಕೊಂಡು ಬಂದಿದೆ.

ದಾಸೋಹಕ್ಕಾಗಿ ಮಾಡುವ ಕೆಲಸವೇ ಕಾಯಕ
ತಾನಿಲ್ಲದೆ ಮನದಿಂದ ದೇವರನ್ನು ಧ್ಯಾನಿಸುವದೇ ಮಂತ್ರ
ತಾನಿಲ್ಲದೆ ಕಾಯದಿಂದ ದೇವರಿಗೆ ಪ್ರಾರ್ಥಿಸುವ ಕೆಲಸವೆಲ್ಲ ಕಾಯಕವಾಯಿತು
ಶ್ರದ್ಧೆ-ಭಕ್ತಿಯಿಂದ ಕಾಯಕ ಮಾಡುವೊಡೆ
ಲಕ್ಷ್ಮೀ ತಾನಿಪ್ಪಳು ಎಲ್ಲಿ ನೋಡಿದಲ್ಲಿ ದಾಸೋಹ ಮಾಡುವಲ್ಲಿ
ಕಾಯಕದಿಂದ ಪಡಿ ಪದಾರ್ಥಗಳು ಅರ್ಪಿತಕ್ಕೆ ಯೋಗ್ಯವಾಗುವವಯ್ಯ
ತನ್ನಪಾಡಿಗಾಗಿ ಮಾಡುವುದು ಉಪಜೀವನ
ತನ್ನಪಾಡಿಗಲ್ಲದೆ ಪರಹಿತ ಮಾಡುವುದು ಒಳ್ಳೆಯ ಜೀವನ
ತನ್ನಪಾಡಿಗಲ್ಲದೆ ಪರಹಿತಾರ್ಥ ಮಾಡುವಲ್ಲಿ
ಲಿಂಗಾರ್ಪಿತವೆಂದು ಅರ್ಪಣೆಗೈವುದೇ ಕಾಯಕ ದಾಸೋಹವಯ್ಯ.
ಇದುವೇ ಕಾಯಕ ದಾಸೋಹ ಸೂತ್ರವಾಯಿತ್ತು.
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ತಾನಿಲ್ಲದೆ ಭಕ್ತಿ ಶ್ರದ್ಧೆಯಿಂದ ಮಾಡುವುದು ಕಾಯಕ,
ತಾನಿಲ್ಲದೆ ಭಕ್ತಿ ಶ್ರದ್ಧೆಯಿಂದ ನೀಡುವುದು ದಾಸೋಹ
ತಾನಿಲ್ಲದೆ ಭಕ್ತಿ ಶ್ರದ್ಧೆಯಿಂದ ಪಡೆವುದೇ ಪ್ರಸಾದ.
ಅಹಂಕಾರವಿಲ್ಲದೆ ಭಕ್ತಿಪೂರ್ವಕವಾಗಿ ಮಾಡುವ ಕಾರ್ಯ ಕಾಯಕವಾಗುತ್ತದೆ. ಪೂಜೆಯಾಗುತ್ತದೆ.
ಹಮ್ಮಿನಿಂದ ಮಾಡಿದ ಭಕ್ತಿ ಕರ್ಮಕ್ಕೆ ಮೂಲವಾಗಿ ಪೂಜೆಯಿದ್ದರೂ ಕರ್ಮವಾಗುತ್ತದೆ.
ನಿರಹಂಕಾರದಿಂದ ತಾನು ಪಡೆದುದನ್ನು ಭಕ್ತಿಯಿಂದ
ತನ್ನ ಹಾಗೂ ಪರರ ಪ್ರಾಣ ಜಂಗಮಕ್ಕೆ ತೃಪ್ತಿ ಪಡಿಸುವುದೇ ದಾಸೋಹ
ಇಂಥ ದಾಸೋಹಿ ನಿಜ ಪದವನ್ನು ಹೊಂದಿದವನಾಗಿರುತ್ತಾನೆ. ನಿರಹಂಕಾರಿಯೇ ದಾಸೋಹಿ,
ಶಿವಲೀಲೆಗಾಗಿ ಕರ್ತನೇ ಬುವಿಗೆ ಬಂದು ನಿಂತು ಲಿಂಗವಾಗಿ ಚಲಿಸಿ ಜಂಗಮವಾಗಿ
ಅರಿದು ಗುರುವಾಗಿ ಇರುವ ಈ ಗುರು ಲಿಂಗ ಜಂಗಮ ಒಂದೇ ಅಲ್ಲದೆ ಬೇರಿಲ್ಲ.
ಸದಾಚಾರಿಯಾಗಿ ಲಿಂಗಾಚಾರಿಯಾಗಿ ಶಿವಾಚಾರಿಯಾಗಿ ಗಣಾಚಾರಿಯಾಗಿ ಭೃತ್ಯಾಚಾರಿಯಾಗಿ
ಈ ಗುರುಲಿಂಗ ಜಂಗಮಕ್ಕೆ ಭಸ್ಮರುದ್ರಾಕ್ಷಿ ಮಂತ್ರ ಸಾಧನೆ ಮೂಲಕವಾಗಿ
ಷಟಸ್ಥಲ ಭಕ್ತಿದಾಸೋಹಂಗೈದು
ತ್ರಿವಿಧಕ್ಕೆ ತ್ರಿವಿಧವನರ್ಪಿಸುವುದೇ ದಾಸೋಹ ಸೂತ್ರವಯ್ಯ.
ಈ ಮೂರು ಒಂದಲ್ಲದೆ ಬೇರೆ ಅಲ್ಲವೆಂದರಿದು
ಭಕ್ತನಾಗಿ ಅಂತರಂಗ ಬಹಿರಂಗಪ್ರಾವರಣದಿಂದ ದಾಸೋಹ ಪೂಜೆ ಮಾಡುವಲ್ಲಿ
ತಾನಿಲ್ಲದೆ ಮಾಡುವುದು, ತಾನಿಲ್ಲದೆ ನೀಡುವುದು, ತಾನಿಲ್ಲದೆ ಭಕ್ತಿಯಿಂದ
ಸ್ವೀಕರಿಸುವ ತೀರ್ಥ ಪ್ರಸಾದವೇ ಫಲ ಪದಪವಯ್ಯ
ಅಂಥ ಭಕ್ತನೇ ಲಿಂಗವಯ್ಯ ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಗುರುಲಿಂಗ ಜಂಗಮಕ್ಕೆ ತನುಮನ ಧನವನರ್ಪಿಸುವಲ್ಲಿ
ಮಾಡಿದೆನೆಂಬುದು ಮನದಲ್ಲಿ ಹೊಳೆಯದಿದ್ದಡೆ ಬೇಡಿದ್ದನ್ನೀವನೆಂದರು ಬಸವಾದಿ ಶರಣರು,
ಪಡೆದ ಆ ಪಡಿ ಪದಾರ್ಥಗಳೇ ಪ್ರಸಾದವಾಗಿ ಬಪ್ಪವು
ಆ ಪ್ರಸಾದದಿಂದ ಕರ್ಮಂಗಳು ಹೋಗಿ ನಿತ್ಯಾನಂದ ಅಳವೊಪ್ಪುದು
ಇದುವೇ ದಾಸೋಹ ಸಿದ್ಧಿ ಇದುವೇ ದಾಸೋಹ ಸೂತ್ರ
ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಕಾಯವೇ ಭಕ್ತ ಪ್ರಾಣವೇ ಜಂಗಮ. ಒಳಗಿನ ಜಂಗಮನನ್ನು ಅರಿದು ಪೂಜಿಸಲು ಹೊರಗಿನ
ಜಂಗಮ ಪೂಜೆ. ಗುರುಲಿಂಗಜಂಗಮವೇ ದೈವ. ಅರ್ಪಿಸಿ ಅರ್ಚನೆ ಗೈವುದೇ ದಾಸೋಹ. ಅದರ

…ರ್ಥ ಪ್ರಸಾದ ಸಕಲ ಜೀವರಾಶಿಯ ಜೀವನ ಸೂತ್ರ ಕಾಯಕ ಮತ್ತು ದಾಸೋಹ. ಸಕಲ …ತ್ಮರಲ್ಲಿ ಪರಮಾತ್ಮನನ್ನು ಕಂಡುಕೊಂಡು ಪೂಜಿಸುವುದೇ ದಾಸೋಹ. ಹಸಿದವರಿಗೆ ಊಟ-ಬಡಿಸಿ ಸಂತೃಪ್ತಿಪಡಿಸಿ ಆನಂದಿತರನ್ನಾಗಿ ಮಾಡುವುದು ಹೇಗೆ ದಾಸೋಹವಾಗುವುದೋ ಅದೇ ರೀತಿ ಅಜೀರ್ಣರಾದವರಿಗೆ ಉಪವಾಸವಿರಿಸಿ ಅವರ ಆರೋಗ್ಯ ಕಾಪಾಡಿ ಆನಂದವನ್ನುಂಟು ಮಾಡುವುದೂ ದಾಸೋಹ. ಸಂತೃಪ್ತಿಯೇ ದಾಸೋಹದ ಪ್ರಮುಖ ಲಕ್ಷಣ. ಪ್ರತಿಯೊಂದು ಹಂತದಲ್ಲಿ ಸಹಜವಾಗಿ ಅರ್ಪಿತ ಭಾವನೆ ಹೊಂದಿದ, ಸರ್ವದರಲ್ಲಿ ದೈವವಿದೆಯೆಂದು ನಂಬಿದ ಭಕ್ತನಲ್ಲಿ ಭಕ್ತಿರತಿ ಅಧಿಕವಾಗಿ ಅಂಥ ಅವಸ್ಥೆಯಲ್ಲಿ ಸರ್ವಸ್ವವೂ ಲಿಂಗಮಯವಾಗಿ ಕಾಣುತ್ತದೆ.

ಅಂಗಲಿಂಗ ಸಂಬಂಧಗೈವ ದಾಸೋಹ ಸೂತ್ರ ನವಲಿಂಗ ಸಕೀಲವಯ್ಯ
ಈ ಸಂಬಂಧವಾಗಿ ಮಾಂಸಪಿಂಡ ಹೋಗಿ ಮಂತ್ರಪಿಂಡವಾಗಿ ಪ್ರಸಾದ ಕಾಯವಾಗುವದಯ್ಯ
ಪಂಚೇಂದ್ರಿಯ ನಿಗ್ರಹಿಸಿದರೆ ಹೊಂದವವು ದೋಷಂಗಳು
ಅವುಗಳನತಿಗಳೆಯದೆ ಶಿವಕೊಟ್ಟ ಕಾಯವ ಕೆಡಿಸಲಾಗದೆಂದರು ಬಸವಾದಿ ಪ್ರಮಥರು
ಆ ಪ್ರಮಥರು ರತಿ ಸುಖವನ್ನು ಅತಿಗಳೆಯಲಿಲ್ಲವಯ್ಯ
ಹುಳಿವಿಡಿದು ಘೃತವ ಕಾಣುವಂತೆ, ಭೋಜನವಿಡಿದು ಚೈತನ್ಯ ಕಾಣುವಂತೆ
ಪದಾರ್ಥವ ನವಲಿಂಗಕ್ಕರ್ಪಿಸಿದರೆ ವೃತ್ತಿಕರಣಂಗಳುಮಾಯವಾಗಿ ಮಹಾಪ್ರಸಾದಕಾಯವಾಗಿತ್ತಯ್ಯ
ಕಾಯಭಕ್ತನು ಪ್ರಾಣಜಂಗಮ ಲಿಂಗಕ್ಕೆ ಶಿವಲಿಂಗ (ಕಣ್ಣು) ದ ಮುಖಾಂತರ
ರೂಪು ಪದಾರ್ಥವನರ್ಪಿಸಿ ದಾಸೋಹಗೈದು ಪಡೆವುದೇ ರೂಪು ಪ್ರಸಾದ
ಕಾಯ ಭಕ್ತನು ಪ್ರಾಣ ಜಂಗಮ ಲಿಂಗಕ್ಕೆ ಗುರುಲಿಂಗ (ಜಿಹ್ವೆ) ದ ಮುಖಾಂತರ
ರಸಪದಾರ್ಥವನರ್ಪಿಸಿ ದಾಸೋಹಗೈದು ಪಡೆವುದೇ ರಸ ಪ್ರಸಾದ
ಕಾಯ ಭಕ್ತನು ಪ್ರಾಣಜಂಗಮ ಲಿಂಗಕ್ಕೆ ಆಚಾರಲಿಂಗ (ನಾಸಿಕ) ದ ಮುಖಾಂತರ
ಗಂಧಪದಾರ್ಥವನರ್ಪಿಸಿ ದಾಸೋಹಗೈದು ಪಡೆವುದೇ ಗಂಧಪ್ರಸಾದ
ಕಾಯಭಕ್ತನು ಪ್ರಾಣಜಂಗಮಲಿಂಗಕ್ಕೆ ಜಂಗಮಲಿಂಗ (ಸ್ಪರ್ಶ)ದ ಮುಖಾಂತರ
ಸ್ಪರ್ಶ ಪದಾರ್ಥವನರ್ಪಿಸಿ ದಾಸೋಹಗೈದು ಪಡೆವುದೇ ಸ್ಪರ್ಶ ಪ್ರಸಾದ.
ಕಾಯ ಭಕ್ತನು ಪ್ರಾಣ ಜಂಗಮಲಿಂಗಕ್ಕೆ ಪ್ರಸಾದಲಿಂಗ (ಶಬ್ದ)ದ ಮುಖಾಂತರ
ಶಬ್ದ ಪದಾರ್ಥವನರ್ಪಿಸಿ ದಾಸೋಹಗೈದು ಪಡೆವುದೇ ಶಬ್ದ ಪ್ರಸಾದ
ಕಾಯಭಕ್ತನು ಪ್ರಾಣ ಜಂಗಮಲಿಂಗಕ್ಕೆ ಪಂಚಲಿಂಗಗಳ ಮುಖಾಂತರ
ಪಂಚ ಪದಾರ್ಥ (ತೃಪ್ತಿ)ಗಳನ್ನು ಮಹಾಲಿಂಗದ ಮುಖಾಂತರ
ತೃಪ್ತಿ ಪದಾರ್ಥವನರ್ಪಿಸಿ ದಾಸೋಹಗೈದು ಸಂತೃಪ್ತಿ ಪಡೆವುದೇ ತೃಪ್ತಿ ಪ್ರಸಾದ
ಕಾಯಭಕ್ತನು ಪ್ರಾಣ ಜಂಗಮಲಿಂಗಕ್ಕೆ ಇಷ್ಟಲಿಂಗ (ನಿಷ್ಕಳಲಿಂಗ)ದ ಮುಖಾಂತರ
ತನುವನರ್ಪಿಸಿ ದಾಸೋಹಗೈದು ಪಡೆವುದೇ ಕಾಯ ಪ್ರಸಾದ
ಕಾಯಭಕ್ತನು ಪ್ರಾಣ ಜಂಗಮಲಿಂಗಕ್ಕೆ ಪ್ರಾಣಲಿಂಗ (ನಿಶ್ಶೂನ್ಯಲಿಂಗ)ದ ಮುಖಾಂತರ
ಮನವನರ್ಪಿಸಿ ದಾಸೋಹಗೈದು ಪಡೆವುದೇ ಪ್ರಸನ್ನ ಪ್ರಸಾದ
ಕಾಯ ಭಕ್ತನು ಪ್ರಾಣ ಜಂಗಮಲಿಂಗಕ್ಕೆ ಭಾವಲಿಂಗ (ನಿರಂಜನಲಿಂಗ)ದ ಮುಖಾಂತರ
ಧನವನರ್ಪಿಸಿ ದಾಸೋಹಗೈದು ಪಡೆವುದೇ ಪರಮಾನಂದ ಪ್ರಸಾದ
ಪಂಚಲಿಂಗಗಳ ಮುಖಾಂತರ ಅರ್ಪಿತವಾಗುವ ಪದಾರ್ಥಗಳು ಹೊರಗಣವೆನಿಸದೆ
ಇಷ್ಟ ಪ್ರಾಣ ಭಾವಲಿಂಗಕ್ಕೆ ತನುಮನ ಧನ ಎನ್ನದೆಂದೆನಿಸದೆ
ಎಲ್ಲವೂ ನಿನ್ನದೆಂದಡೆ ತನ್ನವನನ್ನಾಗಿ ಮಾಡಿಕೊಳ್ಳುವನಯ್ಯ
ಇದುವೆ ಅಂತರಂಗ ಬಹಿರಂಗ ನವಲಿಂಗ ಸಕೀಲ ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಗುರುಲಿಂಗ ಜಂಗಮವೇ ಪತಿಯಾಗಿ ಅಷ್ಟಾವರಣ ಮನೆಯಲ್ಲಿ
ನಿರಂತರ ನಿಸ್ಸೀಮ ಪ್ರೇಮವೇ ಘಟಸ್ಥಲ ಭಕ್ತಿ ದಾಸೋಹವಾಯಿತ್ತು ಎಮ್ಮ ಜಗತನದಲ್ಲಿ
ಮಂತ್ರ ರುದ್ರಾಕ್ಷಿ ಭಸ್ಮ ಪ್ರೇಮಾಲಂಕಾರ ಸಾಧನವಾಯಿತ್ತು.
ಪಂಚಾಚಾರ ನಡೆಯೇ ಒನಪು ವಯ್ಯಾರವಾಯಿತ್ತು ಭಕ್ತಿಲಂಪಟ ಲಿಂಗಗೆ
ಇಂತಪ್ಪ ಮಹಾಲಿಂಗಪತಿಯು ನವದ್ವಾರ ಮುಖಾಂತರ
ದರ್ಶನ ಪಡೆವುದೇ ನವಲಿಂಗ ಸಕೀಲವಯ್ಯ
ಇಂತಿ ಚತುರ್ವಿಧ ಸೂತ್ರಗಳು ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಶಿವಪಥವನರಿವೂಡೆ ಗುರುಪಥ ಮೊದಲೆಂದನಯ್ಯಾ ಸಂಗನ ಬಸವ
ಕೂಡಲ ಸಂಗನ ಅರಿವೊಡೆ ಶರಣರ ಸಂಗವೇ ಮೊದಲು
ಶಿವಭಕ್ತನಿದ್ದ ಠಾವು ದೇವಲೋಕಕ್ಕಿಂತ ಅಧಿಕ
ಭಕ್ತನ ಅಂಗಳ ವಾರಣಾಸಿಗಿಂತ ಅಧಿಕ
ಆ ಭಕ್ತನ ಕಾಯವೇ ಕೈಲಾಸಕ್ಕಿಂತ ಅಧಿಕವಾದ ಕಾರಣ
ಎಮ್ಮವರು ಸ್ಥಾವರ ಯಾತ್ರೆ ಸಲ್ಲದೆಂದರಯ್ಯ
ಶರಣ ಸಂಗ ದಾಸೋಹ ಯಾತ್ರೆ ಬೇಕೆಂದರಯ್ಯ
ಲಕ್ಷ ಗಾವುದ ದೂರ ಹೋಗಿ ಭಕ್ತನ ಸಂಗ ಮಾಡುವುದು ಸದಾಚಾರವಯ್ಯಾ
ಅಲ್ಲಿ ಕೂಡಿ ದಾಸೋಹ ಮಾಡಿದಡೆ ಕೂಡಿಕೊಂಡಿಪ್ಪನು ಕೂಡಲ ಸಂಗಯ್ಯ ಎಂದರೆಮ್ಮವರು
ಶರಣ ಸಂಗವೇ ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ -ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಆದ್ದರಿಂದ ಶರಣಬಸವ ಮಹಾ ದಾಸೋಹ ಪೀಠಕ್ಕೆ ಬರುವ ಸದ್ಭಕ್ತರು ತನ-ಭಕ್ತ, ಪ್ರಾಣ ಜಂಗಮ ರೂಪವಾದ ಶರಣರೊಡಗೂಡಿ ದಾಸೋಹ ಮಾಡುತ್ತಾರೆ, ಇದು ಕೇವಲ ಜಾತ್ರೆ-ಯಾಗಿರದೆ, ಮಹಾ ದಾಸೋಹಿಯ ದರ್ಶನ ಪಡೆಯಲು ಬರುವ ದಾಸೋಹಿಗಳ ಮಹಾದಾಸೋಹ-ಯಾತ್ರೆಯಾಗಿರುತ್ತದೆ. ಪುರಾತನರು, ಬಸವಾದಿ ಪ್ರಮಥರು ಶರಣಬಸವೇಶ್ವರರು ತಾವು ದಾಸೋಹ ಮಾಡುವುದರ ಜೊತೆಗೆ ಲಕ್ಷಾವದಿ ಭಕ್ತರಿಗೆ ದಾಸೋಹ ಮಾಡಲುಹಚ್ಚಿ ಅವರನ್ನು ದಾಸೋಹಿ-ಗಳನ್ನಾಗಿಸಿ ಮಹಾದಾಸೋಹಿಗಳಾಗಿದ್ದಾರೆ. ಇದು ಶರಣಬಸವೇಶ್ವರ ಮಹಾದಾಸೋಹ ಪೀಠ-ಪರಂಪರೆಯಾಗಿದೆ.

ಕೊಡುವುದನೆ ಕಲಿತು ದಾಸೋಹಿ, ಕೊಡುವುದನೆ ಕಲಿಸಿ ದಾಸೋಹಿ
ಕೊಡುವುದನೆ ರೂಢಿಯೊಳು ರೂಢಿಸಿ ಆರೂಢ ದಾಸೋಹಿ
ಸಕಲ ಜೀವಾತ್ಮರಿಗೆ ಲೇಸನೇ ಬಯಸಿ ಶಾಂತಿಯನರುಹಿ ದಾಸೋಹಿ
ಸರ್ವದರಲ್ಲಿ ದಾಸೋಹ ಬೇಕೆಂಬ ಸೂತ್ರ ನರುಹಿದ ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಅಷ್ಟಾವಕ್ರ, ಶಾಂಡಿಲ್ಯ ಮತ್ತು ನಾರದರು ಹಿಂದಿನ ಋಷಿಮುನಿಗಳ ಮಹಾಭಕ್ತರ ಜೀವನದ ಹಾಗೂ ತಮ್ಮ ಜೀವನದ ಅನುಭವಗಳನ್ನು ಅಳವಡಿಸಿಕೊಂಡು ಹೇಗೆ ಭಕ್ತಿ ಸೂತ್ರಗಳನ್ನು ರಚಿಸಿದರೋ ಅದರಂತೆ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಶಿವಶರಣರ ಮತ್ತು ಶರಣಬಸವರ ಲಿಂಗೈಕ್ಯ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರ ದಾಸೋಹ ಭಕ್ತಿಪರಂಪರೆ ಹಾಗೂ ತಮ್ಮ ಅನುಭವಗಳನ್ನು ದಾಸೋಹ ಸೂತ್ರಗಳನ್ನಾಗಿ ರಚಿಸಿದ್ದಾರೆ. ಬುದ್ಧ ಆಗಿಹೋಗಿ

...ನೂರು ವರ್ಷಗಳ ನಂತರ ಅವನ ಶಿಷ್ಯರು ಆತನ ತತ್ವಗಳನ್ನು ಕೂಲಂಕಷವ... ಒಂದು ನಿಷ್ಕರ್ಷೆಗೆ ಬಂದು ಅವುಗಳನ್ನು ಪ್ರಚುರ ಪಡಿಸಿದಂತೆ ಪೂಜ್ಯ ಶ್ರೀ 'ಅಪ... ...ವರಿಂದ ಅರವತ್ತುಮೂರು ಪುರಾತನರು, ಬಸವಾದಿ ಪ್ರಮಥರು ಮತ್ತು ಶರಣಬಸವೇಶ್ವರ ಹಾಗೂ ಅವರ ಪರಂಪರೆಯವರು ನಡೆದಂಥ ದಾಸೋಹ ಜೀವನ ಅನುಭವ ರೂಪ ತಾ... ದಾಸೋಹ ಸೂತ್ರವಾಗಿ ರಚಿಸಲ್ಪಟ್ಟಿವೆ. ಪ್ರಸ್ಥಾನತ್ರಯಕ್ಕೆ ದ್ವೈತ ಅದ್ವೈತ ವಿಶಿಷ್ಟಾದ್ವೈ... ಶಕ್ತಿವಿಶಿಷ್ಟಾದ್ವೈತ ಪ್ರತಿಪಾದಕರು ತಮ್ಮ ತಮ್ಮ ತತ್ವಜ್ಞಾನ ಪ್ರತಿಪಾದನೆ ಮಾಡಿದರ... ಇವರ ಪೂರ್ವದಲ್ಲಿ ನಾರದ, ಶಾಂಡಿಲ್ಯ ಮೊದಲಾದವರು, ಭಕ್ತಿಸೂತ್ರ ರಚಿಸಿ ಭಾರತೀಯ ತತ್ವಜ್ಞಾನದ ಸಂಸ್ಕೃತಿಗೆ ಮಹತ್ವಪೂರ್ಣ ಕೊಡುಗೆ ನೀಡಿದ್ದಾರೆ. ಅದೇ ರೀತಿ, ಭಾರತೀಯ ಅತ್ಯುಚ್ಚ ಮಟ್ಟದ ಸಂಸ್ಕೃತಿಯ ಫಲ ದಾಸೋಹ ಸಂಸ್ಕೃತಿಯನ್ನು ಪೂಜ್ಯ 'ಅಪ್ಪ' ಅವರ ದಾಸೋಹ ಸೂತ್ರಗಳನ್ನಾಗಿ ರಚಿಸಿದ್ದು ಕರ್ನಾಟಕ ಭಾರತ ಸಂಸ್ಕೃತಿಗಷ್ಟೇ ಅಲ್ಲ ವಿಶ್ವಸಂಸ್ಕೃತಿ... ಒಂದು ಮಹಾನ್ ಕೊಡುಗೆಯಾಗಿದೆ. ಈ ದಾಸೋಹ ಸೂತ್ರಗಳನ್ನು ಪ್ರಸ್ಥಾನ ಸೂತ್ರಗಳಿ... ಅನ್ವಯಿಸುವದಷ್ಟೇ ಅಲ್ಲ ವಿಶ್ವದ ಎಲ್ಲ ತತ್ವ ಎಲ್ಲ ಧರ್ಮ ಎಲ್ಲ ವಿವಿಧ ಆಯಾಮ.ಗಳಿ... ಅನ್ವಯಿಸಲಿಕ್ಕೆ ಬರುವದರಿಂದ ವಿಶ್ವಸಂಸ್ಕೃತಿಗೆ ಇದೊಂದು ದೊಡ್ಡ ಕೊಡುಗೆಯಾಗಿದೆ.

ಅಷ್ಟಾವರಣದಲ್ಲಿ ದಾಸೋಹ, ಷಟಸ್ಥಲದಲ್ಲಿ ದಾಸೋಹ, ಪಂಚಾಚಾರದಲ್ಲಿ ದಾಸೋಹ ನವಲಿಂಗ ಸಕೀಲಗಳಲ್ಲಿ ದಾಸೋಹ ಮೊದಲಾದವುಗಳು ದಾಸೋಹಂಭಾವದಿಂದಲೆ ಸಾಧ್ಯವೆಂದು ಧರ್ಮ, ಅರ್ಥ, ಕಾಮ, ಮೋಕ್ಷ, ಸಮಾಜ, ಶಿಕ್ಷಣ, ಸಾಹಿತ್ಯ, ಶಿಲ್ಪ, ಇತ್ಯಾದಿಯಾ... ಜೀವನದ ಪ್ರತಿಯೊಂದು ರಂಗ ಹಾಗೂ ಹಂತದಲ್ಲಿ ದಾಸೋಹ ಮಹತಿ ಉಂಟೆಂದು ಗುರುತಿಸಿದ್ದಾರೆ.

ಪ್ರಪಂಚಕ್ಕೂ ಪಾರಮಾರ್ಥಕ್ಕೂ ಇರುವ ಸಂಬಂಧವೆಂತಯ್ಯಾ
ಶರಣ ಸತಿಯೆಂದಡೇನು ಲಿಂಗ ಪತಿಯೆಂದಡೆಂತಯ್ಯ
ಸತಿಯಲ್ಲಿಟ್ಟ ಸಂಬಂಧವೇ ಪ್ರೇಮ
ಮಕ್ಕಳಲ್ಲಿಟ್ಟ ಸಂಬಂಧವೇ ಮಮತೆ
ಬಂಧುಭಾಂದವರಲ್ಲಿಟ್ಟ ಸಂಬಂಧವೇ ಸ್ನೇಹ.
ಗುರುಹಿರಿಯರಲ್ಲ ಪರಮಾತ್ಮನಲ್ಲಿಟ್ಟ ನಿರಂತರ ಅತಿ ಪ್ರೇಮವೇ ಶ್ರದ್ಧೆಗೊಂಡು
ಭಕ್ತಿದಾಸೋಹ ವಾಯಿತ್ತಯ್ಯ

ಆ ಭಕ್ತನ ಭಕ್ತಿದಾಸೋಹ ನಿಷ್ಠೆಗೊಂದು ಮಾಹೇಶನಾಗುವನಯ್ಯಾ
ಆ ಮಾಹೇಶ್ವರನ ಅವಧಾನ ಭಕ್ತಿ ದಾಸೋಹವೇ ಪ್ರಸಾದಿಯಯ್ಯ
ಆ ಪ್ರಸಾದಿಯ ಅನುಭವ ಭಕ್ತಿ ದಾಸೋಹವೇ ಪ್ರಾಣಲಿಂಗಿಯಯ್ಯ
ಆ ಪ್ರಾಣಲಿಂಗಿಯ ಆನಂದಭಕ್ತಿ ದಾಸೋಹವೇ ಶರಣನಯ್ಯ.
ಆ ಶರಣ ಸತಿಯ ಸಮರಸ ಭಕ್ತಿ ದಾಸೋಹವೇ ಲಿಂಗಪತಿಯ ಸಮರಸ ಐಕ್ಯವಯ್ಯಾ
ಅಲ್ಲಿ ಮಾಡುವವನೂ ಮಾಡಿಸಿಕೊಂಬುವವನೂ ಅವನೇ ಆದ ಕಾರಣ
ಎಲ್ಲ ಸಮ ಸಮುಚ್ಚಯಕ್ಕೂ ದಾಸೋಹ ಭಕ್ತಿಯೆಂದರಿದ ಕಾರಣ
ಇದು ಷಟಸ್ಥಲ ದಾಸೋಹ ಸೂತ್ರ ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಲಿಂಗಾಚಾರ ಸದಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರಗಳೆಂಬ
ಪಂಚಾಚಾರವೇ ಪಂಚ ದಾಸೋಹವಯ್ಯಾ
ಲಿಂಗಸಂಗವಲ್ಲದೆ ಅನ್ಯವನರಿಯದಿಹುದೆ ದಾಸೋಹವಾಗಿ ಲಿಂಗಾಚಾರವಾಯಿತ್ತಯ್ಯಾ,

ದಾಸೋಹಕ್ಕಾಗಿ ಮಾಡುವ ಕೆಲಸವೆಲ್ಲವೂ ಕಾಯಕವಾಗಿ ನಿರಂತರ ನಡೆಯಬೇಕಾದುದೆ ಸದಾಚಾರವಯ್ಯಾ
ಸಕಲ ಜೀವಾತ್ಮರಲ್ಲಿ ಶಿವಾತ್ಮರನ್ನು ಕಂಡು ದಾಸೋಹಗೈವುದೇ ಶಿವಾಚಾರವಯ್ಯಾ
ಶಿವಾಚಾರನಿಂದೆ ಕೇಳದಿಹುದೇ ದಾಸೋಹವಾಗಿ ಗಣಾಚಾರವಾಯಿತ್ತು
ಶಿವನಿಗಿಂತ ಶಿವಶರಣರಧಿಕವೆಂದರಿದು
ತನುಮನ ಧನವರ್ಪಿಸಿ ದಾಸೋಹಗೈವುದೇ ಭೃತ್ಯಾಚಾರವಯ್ಯಾ
ಇಂತೀ ಪಂಚಾಚಾರಗಳಲ್ಲಿ ನಿತ್ಯದಾಸೋಹ ಕಾಣುವುದೇ ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ನ್ನಬಸವಣ್ಣನವರು ಷಟಸ್ಥಲವನ್ನು ನಿರ್ಣಯವಾಗಿ ಸಮಸಮುಚ್ಚಯಗೊಳಿಸಿದಂತೆ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಜೀವನದ ಪ್ರತಿಯೊಂದು ಹಂತ ಮತ್ತು ಹೊಸ ಆಯಾ-ಮಗಳಲ್ಲಿ ಸರ್ವದರಲ್ಲಿ ದಾಸೋಹ ಮುಖಾಂತರವೇ ಆತ್ಮೋನ್ನತಿ ಪಡೆಯಲು ಅನುವಾಗುವಂಥ ಬೇಯ ಮಹಾ ಸಾಧನೆಯ ದಾಸೋಹ ಸೂತ್ರಗಳನ್ನು ರಚಿಸಿದ್ದಾರೆ. ಸರ್ವಧರ್ಮಕ್ಕೆ ಸರ್ವರ ತ್ಯ ಜೀವನಕ್ಕೆ ಅವಶ್ಯಕವಾದವುಗಳಾಗಿವೆ ಈ ದಾಸೋಹ ಸೂತ್ರಗಳು. ಪುರಾತನರು, ಪ್ರಮಥರು ರಣಬಸವಾದಿ ಶರಣರು ಆಗಿಹೋದ ಈ ನಾಡಿನ ಪರಿಸರದಲ್ಲಿ ವಿಶೇಷವಾಗಿ ಶರಣಬಸವ ಮಹಾದಾ-ಸೋಹ ಪೀಠ ಪರಂಪರೆಯಲ್ಲಿ ದಾಸೋಹಾನುಭಾವ ಸಂಪ್ರದಾಯವಾಗಿ ನಡೆಯಲ್ಲಿ ಸಂಸ್ಕೃತಿ ರೂಪದಲ್ಲಿ ರಿದುಬಂದು, ನುಡಿಯಲ್ಲಿ ದಾಸೋಹ ಸೂತ್ರ ದರ್ಶನವಾಗಿ ಬಂದುದನ್ನು ಇಲ್ಲಿ ಕಾಣಬಹುದು. ರುಲಿಂಗ ಜಂಗಮ ದಾಸೋಹ ನಿತ್ಯವೂ ಶರಣಬಸವ ದಾಸೋಹ ಮಹಾಮನೆಯಲ್ಲಿ ನಿರಂತರವಾಗಿ ಡೆಯುತ್ತ ಬಂದಿದೆ. ಭಕ್ತಾದಿಗಳು ಸಾಮಾನ್ಯವಾಗಿ ಶ್ರಾವಣ ಮಾಸದಲ್ಲಿಯೂ ಮತ್ತು ಶೇಷವಾಗಿ ಮಹಾದಾಸೋಹ ಯಾತ್ರಾ ಸಮಯದಲ್ಲಿಯೂ ಲಕ್ಷಾವಧಿ ಸಂಖ್ಯೆಯಲ್ಲಿ ಬಂದು ರಣನಗರವನ್ನು ಭಕ್ತಿ ಸಾಗರವನ್ನಾಗಿ ಮಾಡುತ್ತಾರೆ. ಅವರು ಶರಣರಾದ ಮಹಾದಾಸೋಹ-ಠಾಧಿಪತಿಗಳಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರ ದರ್ಶನ ಆಶೀರ್ವಾದ ಪಡೆದು ನುಗ್ರಹಿತರಾಗಿ ಶರಣಮಾರ್ಗದಲ್ಲಿ ನಡೆದು ದಾಸೋಹಿಗಳಾಗುತ್ತಾರೆ ಅನುಪಮ ಸಾರಾಯ ಸುಖವನ್ನು ಪಡೆಯುತ್ತಾರೆ. ಶಿವಶರಣರು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ತ್ತ್ವವನ್ನು ನಂಬಿದುದರಿಂದ ಸ್ಥಾವರಲಿಂಗ ಪೂಜೆಗಿಂತ ಗುರುಲಿಂಗ ಜಂಗಮ ಪೂಜೆಗೆ ವಿಶೇಷ ಮಹತ್ವ ಕೊಟ್ಟಿದ್ದಾರೆ ಇಷ್ಟೇ ಏಕೆ ಲಿಂಗಾರ್ಚನೆಗಿಂತ ಜಂಗಮಾರ್ಚನೆಗೆ ಅಧಿಕ ಮಹತ್ವ ಕೊಟ್ಟಿ-ದ್ದಾರೆ ಪತಿ ಪ್ರತ್ಯಕ್ಷನಿರುವಾಗ ಸತಿಗೆ ಆತನ ಭಾವಚಿತ್ರದ ಪೂಜೆ ಆವಶ್ಯಕವೆನ್ನಿಸುವುದಿಲ್ಲ. ಅದೇ ರೀತಿಯಾಗಿ ಸಾಕ್ಷಾತ್ ಶಿವನು ಗುರುಲಿಂಗ ಜಂಗಮರೂಪದಲ್ಲಿ ಸನ್ನಿಧಿಯಲ್ಲಿರುವಾಗ ಇನ್ನಿತರ ಪೂಜೆಗೆ ಅಲ್ಲಿ ಅವಕಾಶವಿಲ್ಲ.

ಶೈವರು ಶಿವದೇವಾಲಯವನೊಡೆಯಬಲ್ಲರೆ
ವೈಷ್ಣವರು ವಿಷ್ಣು ದೇವಾಲಯವನೊಡೆಯಬಲ್ಲರೆ
ಜಿನ-ಬುದ್ಧರು ಬಸದಿ-ವಿಹಾರಗಳ ಧ್ವಂಸಗೊಳಿಸಬಲ್ಲರೆ
ಕ್ರಿಸ್ತ-ಮಹಮ್ಮದಿಯರು ಚರ್ಚು-ಮಸೀದೆಗಳನ್ನು ನಾಶಗೊಳಿಸಬಲ್ಲರೆ
ಕಟ್ಟಿದ ಕಲ್ಲು ಒಡೆಯಬಲ್ಲರಲ್ಲದೆ ನಿನ್ನ ಒಡೆಯಬಲ್ಲರೆ
ಎಲ್ಲ ಧರ್ಮಕ್ಕೂ ಒಬ್ಬನೇ ದೇವ, ನಾಮ ಹಲವಾದರೂ ದೇವನೊಬ್ಬ
ನಿನಗಾಗಿ ಮಾಡದೆ ತಮ್ಮ ತಮ್ಮ ಧರ್ಮಾಭಿಮಾನಕ್ಕೆ ಒಡೆದರಲ್ಲದೆ ನಿನಗಾಗಿ ಅಲ್ಲ.
ಒಡೆಯಲಾಗದು ಒಡೆಯಲಾಗದು ಕೆಡಿಸಲಾಗದು

ನುಸ್ಯಲಾಗದು ಬಾಸ್ಯಲಾಗದು ಬೈದು ನೋಯಿಸಲಾಗದು,
ದೇವಕೊಟ್ಟ ಮಂದಿರಕ್ಕಿಂತಧಿಕವಾದ ಕಾಯುವ ಕೆಡಿಸಲಾಗದು.
ಆ ಕಾಯದಲ್ಲಿಹ ಪ್ರಾಣಜಂಗಮ ಮೂರ್ತಿಯ ನೋಯಿಸಲಾಗದು
ಮಂದಿರ ಒಡೆದ ಪಾಪಕ್ಕಿಂತ ಅಧಿಕ ಕಾಯ ಕೆಡಿಸುವುದು.
ದೇವ ಮೂರ್ತಿ ಒಡೆದುದಕ್ಕಿಂತ ಅಧಿಕ ಪ್ರಾಣಜಂಗಮವ ನೋಯಿಸುವುದು
ಈ ಭಿನ್ನ ಭಾವ ಮನುಜನ ಮನದಲ್ಲಿಹುದಲ್ಲದೆ ಅನ್ಯದಲ್ಲಿಲ್ಲ.
ನನ್ನಲ್ಲಿರುವ ಅನ್ಯರ ಬಗೆಯ ತನ್ನಂತೆ ಮಾಡುವ
ಸಕಲ ಜೀವಾತ್ಮರಲಿ ನಿನ್ನನೆ ಕಂಡಡೆ
ನೀನು ನೋಯ್ದರೂ ಅನ್ಯರ ನೋಯಿಸದಿರು-ದಾಸೋಹಪಥದಲ್ಲಿ.
ಅದೇನು ಕಾರಣವೆಂದಡೆ ಕೊಡದೆ ಕೊಳ್ಳದೆ ಸುಖವಾಗುವದೆಂದರು ಶರಣರು
ಅದು ಕಾರಣ ತನ್ನೀಶನನರಿದು ಸಕಲಜೀವಾತ್ಮರಲ್ಲಿ ಲೀನನೇ ಬಯಸುವ
ಪರಮಾತ್ಮನನ್ನು ಕಾಣುವುದೇ ದಾಸೋಹಸೂತ್ರವಯ್ಯ
ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಆದ್ದರಿಂದ ಭಕ್ತನು ಭಕ್ತರನ್ನು ನೋಡಿ, ಕೂಡಿ, ಆಡಿ, ಹಾಡಿ, ಭಾವಿಸಿ, ಸುಖಿಸಿ, ಮಾಡುವ ದಾಸೋಹವೇ ದಾಸೋಹ ಪೂಜೆಯಾಗಿದೆ. ಹೀಗೆ ದಾಸೋಹ ಮಾಡುವ ಮತ್ತು ಮಾಡಿಸಿಕೊಳ್ಳುವ ಭಕ್ತರು ಪರಸ್ಪರರ ಒಡಲಲ್ಲಿ ಪರಮಾತ್ಮನನ್ನು ಕಾಣುತ್ತಾರೆ. ಈ ರೀತಿ ಅಂತರಂಗ ಬಹಿರಂಗವೆರಡರಲ್ಲಿಯೂ ದಾಸೋಹ ನಡೆಯುತ್ತದೆ.

ಉಪಚಾರಕ್ಕಲ್ಲ ನಮಸ್ಕಾರ, ಶರಣೆಂಬುದು ದಾಸೋಹವಯ್ಯಾ
ದೃಷ್ಟಿಯಾರೆ ಶರಣೆಂದಡೆ ಹುಟ್ಟು ಏಳು ಜನ್ಮದ ಪಾಪ ಹೋಗುವುದೆಂದರು ಪ್ರಮಥರು
ಸಕಲ ಜೀವಾತ್ಮರಲ್ಲಿ ಪರಮಾತ್ಮನಿಹನೆಂದರಿದು
ಪ್ರತಿ ಶರಣಾರ್ಥಿ ಎಂದಡೆ ಶಿವದರ್ಶನ ದಾಸೋಹವಾಯಿತ್ತಯ್ಯಾ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಲಿಂಗದೇವರನ್ನು ಕಾಣುವ ಒಂದೇ ಗುರಿಯುಳ್ಳ ಒಂದೇ ಮಾಧ್ಯಮವಾದ ಜಂಗಮ ದಾಸೋಹ-ಮುಖದಲ್ಲಿ ಸಾಧಿಸಬಲ್ಲ ಸಾಧನೆ ಮಹಾದಾಸೋಹ ಯಾತ್ರೆಯಾಗಿರುತ್ತದೆ. ಜೈನರು ಮಹಾ-ಚೈತನ್ಯವನ್ನು ಅಹಿಂಸೆಯ ಮುಖಾಂತರ ಆರಾಧಿಸಿದರೆ, ಶಿವಶರಣರು ಆ ಮಹಾ ಚೈತನ್ಯವನ್ನು ಜಂಗಮ ಮುಖಾಂತರ ದಾಸೋಹಗೈದು ಪೂಜಿಸುತ್ತಾರೆ. ಮಹಾಚೈತನ್ಯ ಮೂರ್ತಿ ಪರಮಾ-ತ್ಮನನ್ನು ಜಂಗಮ ಮುಖದಲ್ಲಿ [ಸಕಲ ಜೀವಾತ್ಮರಲ್ಲಿ] ಕಾಣುವ ವಿಶಿಷ್ಟ ಸಂಸ್ಕೃತಿ ದಾಸೋಹ ಧರ್ಮ ಶರಣರು ಕರ್ನಾಟಕ-ಭಾರತಕ್ಕೆ ಅಷ್ಟೇ ಅಲ್ಲ, ವಿಶ್ವಕ್ಕೆ ನೀಡಿದ ಮಹಾನ್ ಕೊಡುಗೆಯಾಗಿದೆ. ಮಹಾಮಹಿಮರಾದ ಶರಣಬಸವೇಶ್ವರರಿಗೆ ದಾಸೋಹವೇ ಪರಮ ಧರ್ಮವಾಗಿತ್ತು. ಗುರುಲಿಂಗ ಜಂಗಮರೇ ಅವರ ಆರಾಧ್ಯ ದೇವರಾಗಿದ್ದರು. ಆ ಮುಖಾಂತರವೇ ಅವರು ಆತ್ಮಸಾಕ್ಷಾತ್ಕಾರ ಪಡೆದರು. ಅಂತೆಯೇ ಅವರ ಪೀಠಪರಂಪರೆಯಲ್ಲಿ ಲಿಂಗವನ್ನು ಜಂಗಮದ ಮುಖಾಂತರ ಕಾಣುವುದು ಸರ್ವದರಲ್ಲಿ ದಾಸೋಹವೇ ಬೇಕೆಂಬ ಸತ್ಪರಂಪರೆ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಆ ಪೀಠದ ಅಧಿಪತಿಗಳಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಧಾರ್ಮಿಕ ಸಾಂಸ್ಕೃತಿಕ, ಆಧ್ಯಾತ್ಮಿಕ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಅನುಭವಪೂರ್ಣ ವಿಚಾರಗಳನ್ನು ಅಳವಡಿಸಿ-ಕೊಂಡು ಚೈತನ್ಯ ಮಹಾದಾಸೋಹ ಮೂರ್ತಿಗಳಾಗಿ ಬೆಳಗುತ್ತಿದ್ದಾರೆ. ಅವರು ಜೀವನದ ಪ್ರತಿಯೊಂದು ಆಯಾಮದಲ್ಲಿ ಸರ್ವವಿಧದಲ್ಲಿ ದಾಸೋಹ ಕಂಡುಕೊಂಡಿದ್ದಾರೆ. ಇದಕ್ಕೆ ಒಂದು

ಉದಾಹರಣೆ ಯಾಗಿ ಪೂಜ್ಯ 'ಅಪ್ಪ' ಅವರ ಶಿಕ್ಷಣ ದಾಸೋಹ ದರ್ಶನದ ಸಂಕ್ಷಿಪ್ತ ವಿವ
" ಶಿಕ್ಷಣ ದರ್ಶನವೆಂದರೆ ಸಂಪೂರ್ಣ ದಾಸೋಹಂಭಾವ, ಅರುಹಿನಿಂದೊಡಗೂ
ದಾಸೋಹಂಭಾವ ಜ್ಞಾನದ ಹಸಿವನ್ನು ಹಿಂಗಿಸಿಕೊಳ್ಳಲು ಸರ್ವರನ್ನು ಸಮರ್ಥರನ್ನಾಗಿಸುತ್ತ
ವಿದ್ಯಾರ್ಥಿಗಳು ಪರಮಾತ್ಮನ ಆತ್ಮ ಸ್ವರೂಪರೆಂದು ಬಗೆದು ಬಡವ ಬಲ್ಲಿದ ಮೇಲು ಕೀಳು,
ಬುದ್ಧಿವಂತ ಬುದ್ಧಿಹೀನ ಎಂದು ಪರಿಗಣಿಸದೇ ಶಿಕ್ಷಕರು ವಿದ್ಯಾರ್ಥಿಗಳಲ್ಲಿರುವ ಆತ್ಮಕ್ಕೆ ಜ್ಞಾನ ಪುಷ್ಪ
ವನ್ನರ್ಪಿಸಿ ಪ್ರಸನ್ನಚಿತ್ತನನ್ನು ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡುವುದೇ ಶಿಕ್ಷಣ ದಾಸೋಹ
ದರ್ಶನದ ವ್ಯವಸ್ಥೆಯಾಗಿರುತ್ತದೆ. ಕಲಿಯುವ-ಕಲಿಸುವ ಕಾರ್ಯ ಕೇವಲ ತನಗಾಗಿ ಮಾತ್ರ-
ವಾದರೆ ಉಪಜೀವನವಾಗುವುದು. ಇದರಲ್ಲಿ ಪರಹಿತ ಕಂಡಲ್ಲಿ ಒಳ್ಳೆಯ ಸಂಸ್ಕೃತಿ ಜೀವನವಾ
ಗುವುದು. ಕಲಿಯುವದು ಕಲಿಸುವುದು ತನಗಾಗಿ ಅಷ್ಟೇ ಅಲ್ಲದೆ ಪರಹಿತಮಾಡುವಲ್ಲಿ
ಪರಮಾತ್ಮನನ್ನು ಕಾಣುವದೇ ಕಾಯಕ-ದಾಸೋಹ ಶಿಕ್ಷಣತತ್ವ. ಈ ತತ್ವ ಶರಣಬಸವೇಶ್ವರ
ಶಿಕ್ಷಣ ಸಂಸ್ಥೆಗಳಿಗೆ ಮಾತ್ರವಲ್ಲದೆ, ಕರ್ನಾಟಕ-ಭಾರತಕ್ಕೆ ಅಷ್ಟೇ ಅಲ್ಲದೆ ವಿಶ್ವಜನಾಂಗಕ್ಕೆ ಇಂದಿನ
ಸಂದಿಗ್ಧ ಪರಿಸ್ಥಿತಿಯಲ್ಲಿ ಅವಶ್ಯಕವಾದ ಶಿಕ್ಷಣ ದರ್ಶನವಾಗಿದೆ."

ತಾಯಿ ದೇವರು ತಂದೆ ದೇವರು ಗುರು ದೇವರು ಅತಿಥಿ ದೇವರು
ಸಕಲ ಚರಾಚರ ದೇವರೆಂದಿತ್ತು ಉಪನಿಷತ್ತು
ದೇವರಿಗಿಂತ ತಾಯಿ ಅಧಿಕ, ದೇವರಿಗಿಂತ ತಂದೆ ಅಧಿಕ, ದೇವರಿಗಿಂತ ಗುರು ಅಧಿಕ
ಶಿವನಿಗಿಂತ ಶಿವಶರಣರಧಿಕವೆಂದಿತ್ತು ಶರಣನುಡಿ
'ನಾನೊಬ್ಬನೇ ಉಳಿದೆನಯ್ಯಾ'
ತನ್ನ ಮರೆದು ನಿನ್ನ ಚಿರೆಸಿದ ಬಸವ ತಾನೊಬ್ಬನೇ ಬಕ್ತನಾಗಿ
ಜಗವೆಲ್ಲ ಜಂಗಮವಾಗಿ ದಾಸೋಹ ಸೂತ್ರವಾಯಿತ್ತಯ್ಯಾ
ಮಹಾದಾಸೋಹಿ ಶರಣಬಸವ.

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಪುನರ್ಜನ್ಮವುಂಟೆಂದು ಸಾಧಿಸುವರು ಹಲವರು,
ಪುನರ್ಜನ್ಮವಿಲ್ಲೆಂದು ಅಲ್ಲಗಳೆವರು ಹಲವರು.
ಜನನ ಮರಣ ಭವಿಯ ಲಕ್ಷಣವೆನ್ನುವರು ಹಲವರು
ಎಮ್ಮ ಶರಣಂಗೆ ಜನನವಿಲ್ಲ ಮರಣವಿಲ್ಲವೆಂದರು ಬಸವ ಪ್ರಭು
ಜನನವಾದೊಡೆ ಶಿವಜೀವನದಲ್ಲಿ ಗುರುಲಿಂಗಜಂಗಮಕ್ಕೆ
ದಾಸೋಹಗೈದು ತೀರ್ಥ ಪ್ರಸಾದವ ಪಡೆವೆ.
ಮರಣವಾದೊಡೆ ನಿಮ್ಮ ಶ್ರೀ ಪಾದವನೈದು ಶಿವಸಮಾಧಿ ಹೊಂದುವೆ.
ಅದುಕಾರಣ ಬಾವನ್ನದ ವೃಕ್ಷ ಊರೊಳಗಿದ್ದಡೇನು.
ಅಡವಿಯಲ್ಲಿದ್ದಡೇನು ತನ್ನ ಕಂಪು ಬಿಡಲರಿಯದು.
ಶಿವ ಲೀಲೆಗಿಳಿದಾಗ ದಾಸೋಹಿ-ಲೀಲೆಮುಗಿದಾಗ ಸಮಾಧಿಸ್ಥ
ಜೀವನದಲ್ಲಿ ಲಿಂಗವಂತ-ಮರಣದಲ್ಲಿ ಲಿಂಗೈಕ್ಯ
ಲೀಲೆಯಾದಡೆ ಉಮಾಪತಿ ಲೀಲೆ ಮುಗಿದಡೆ ಸ್ವಯಂಭು
ಅಂತೆಯೇ ಶರಣರ ದಾಸೋಹ ಮಹಾಮನೆ ದೇವಮಂದಿರಕ್ಕಿಂತ ಅಧಿಕ
ಅಲ್ಲಿಗೆ ಹೋಗುವುದೇ ಯಾತ್ರೆ-ನೋಡುವುದೇ ದರ್ಶನ
ಜನನ ಮರಣ ಗೆಲ್ಲುವದೇ ದಾಸೋಹ ಸೂತ್ರವಯ್ಯ
ಮಹಾದಾಸೋಹಿ ಶರಣಬಸವ

(ದಾಸೋಹ ಸೂತ್ರ-ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ)

ಶೈವರು ತಮ್ಮ ಮೋಕ್ಷಕ್ಕಾಗಿ ಸ್ಥಾವರಲಿಂಗ ಯಾತ್ರಾ ಕ್ಷೇತ್ರಗಳಿಗೆ ಹೋದಂ ಶರಣರು ಶಿವಭಕ್ತರನ್ನು ಕಂಡು, ಅಲ್ಲಿ ಕೂಡಿಕೊಂಡು ದಾಸೋಹ ಮಾಡುವಲ್ಲಿ ಕೂ ಕೊಂಡಿಪ್ಪನು ಶಿವನೆಂದು ಬಗೆದ ಶರಣಬಸವೇಶ್ವರರು ಜನ್ಮ ಸ್ಥಳ ಅರಳಗುಂಡಿಗೆಯಿಂ ಶರಣ ನಾಡಾದ ಬಸವಕಲ್ಯಾಣದತ್ತ ಹೊರಟರು. ದಾರಿಯ ಮಧ್ಯದಲ್ಲಿ ಅಲ್ಲಲ್ಲಿ ಅವರಾ ದಂಡರಾಯಗೌಡರು ಮೊದಲಾದ ಅನೇಕ ದಾಸೋಹಿ ಶಿವಭಕ್ತರನ್ನು ಕಂಡರು. ಅವರ ದಾಸೋಹ ಭಕ್ತಿಗೆ ಮಾರುಹೋದರು, ಮುಂದೆ ಕಲಬುರ್ಗಿಯಲ್ಲಿ ದೊಡ್ಡಪ್ಪ ಶರಣ ದಾಸೋಹ ಮಹಾಮನೆಯಲ್ಲಿ ತನು ಮನ ಧನವನರ್ಪಿಸಿ ದಾಸೋಗ್ಯೆವಲ್ಲಿ ಕಲ್ಯಾಣ ನಾಡಿ ದಾಸೋಹ ಪರಂಪರೆಯನ್ನು ಅದರಲ್ಲಿ ಕಂಡರು ಅಂತೆಯೇ ಕಲಬುರ್ಗಿಯೇ ಶರಣ ಬಸವರಿ ನಿಜ ಕಲ್ಯಾಣವಾಯಿತು. ಶಿವನೇ ಮನುಷ್ಯ ರೂಪದಲ್ಲಿ ಬಂದು ಸಿರಿಯೊಳ ಚಂಗಳೆ, ನೀಲೂರ ನುಂಬೆಕ್ಕರ ಭಕ್ತಿ ಪರೀಕ್ಷೆ ಮಾಡಿದುತ್ತೆ, ಮನುಷ್ಯನಲ್ಲಿಯೇ ಪರಮಾತ್ಮನಿರುವುದನ್ನು ಕಂಡ ದೊಡ್ಡಪ್ಪ ನೀಲಮ್ಮ ಶರಣ ದಂಪತಿಗಳು ತಮ್ಮ ತೊಟ್ಟಿಲಲ್ಲಾಡುತ್ತಿದ್ದ ಮಗುವನ್ನು ಪುತ್ರ ಸಂತಾನಾಪೇಕ್ಷೆಯಿಂದ ಬಂದ ವೃದ್ಧ ದಂಪತಿಗಳಿಗೆ ಶರಣಬಸವರು ನೀಡಿದಾಗ ಎಳ್ಳಷ್ಟೂ ವಿಚಲಿತರಾಗದ ಆ ಶರಣ ದಂಪತಿಗಳ ದಾಸೋಹ ಭಕ್ತಿಗೆ ಅನುಕಂಪಿತರಾಗಿ ಆ ದೊಡ್ಡಪ್ಪ ಶರಣರ ವಂಶ-ಪಂಶಕ್ಕೆಲ್ಲ ತಾನೇ ಮಗನಾಗಿ ಹುಟ್ಟಿ ಬರುತ್ತಿದ್ದೇನೆಂದು ಹೇಳಿ ಅನುಗ್ರಹಿಸಿದರು ಯಾವ ಸತ್ಕಾರ್ಯಕ್ಕೆ ತಮ್ಮ ಮಗ ಅರ್ಪಿತನಾಗಿರುವನೋ ಆ ಮಹಾದಾಸೋಹ ಕಾರ್ಯ ನಿರಂತರವಾಗಿ ತಮ್ಮ ಮಹಾಮನೆಯಲ್ಲಿ ನಡೆಯಲೆಂದು ದೊಡ್ಡಪ್ಪ ಶರಣರು ಬಿನ್ನವಿಸಿ ಕೊಂಡರು. ಆ ಶರಣ ದಂಪತಿಗಳ ತ್ಯಾಗಮಹಿಮೆ, ಮಹಾದಾಸೋಹ ಧರ್ಮವೇ ಶರಣ-ಬಸವೇಶ್ವರ ಮಹಾದಾಸೋಹ ಪೀಠವಾಗಿ ಮುಂದುವರಿದಿದೆ. ಈ ಪೀಠ ಪರಂಪರೆಯಲ್ಲಿ ಕಾಯಕ ದಾಸೋಹ, ಪ್ರಸಾದ ಮಹಿಮೆಗಳು ನಿತ್ಯ ನೂತನವಾಗಿ ನಿರಂತರವಾಗಿ ನಡೆಯುತ್ತ ಬಂದಿವೆ

ಪರಹಿತದಲ್ಲಿ ಪರಮಾತ್ಮನನ್ನು ಕಂಡು ಪರಮ ದಾಸೋಹಿ ಶರಣಬಸವರು ವೃದ್ಧ ಜಂಗಮನ ಸಂಕಷ್ಟ ತಾವು ಸ್ವೀಕರಿಸಿ ತಮ್ಮ ಸಂತುಷ್ಟಿಯನ್ನು ಧಾರೆಯೆರೆದು ಮಹಾದಾ-ಸೋಹಿ ಎನ್ನಿಸಿ ಕ್ರಿ. ವ. ೧೮೨೨ ರಲ್ಲಿ ಲಿಂಗೈಕ್ಯರಾದರು. ಶರಣಬಸವೇಶ್ವರರ ನಂತರ ಪೂಜ್ಯ ಮೊದಲನೆಯ ದೊಡ್ಡಪ್ಪ ಶರಣರು ಆಮೇಲೆ ಪೂಜ್ಯರಾದ ಎರಡನೆಯ ಶರಣಬಸವಪ್ಪ ಅಪ್ಪ, ಬಸವಣ್ಣಪ್ಪ ಅಪ್ಪ, ಲಿಂಗಬಸವಪ್ಪ ಅಪ್ಪ, ಮೂರನೆಯ ಶರಣಬಸವೇಶ್ವರ, ಸಂಸ್ಥಾನದ ಮಹಾದಾಸೋಹ ಪೀಠಾಧಿಪತಿಗಳಾದರು.

ಆ ಮೇಲೆ ಏಳನೆಯ ಮಹಾದಾಸೋಹ ಪೀಠಾಧಿಪತಿಗಳಾಗಿ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರು ಮಹಿಮಾ ಪುರುಷ ಶರಣಬಸವೇಶ್ವರರಂತೆ ಎಂಬತ್ತು ವರ್ಷಗಳ ದೀರ್ಘಕಾಲ ದಾಸೋಹಗೈದರು. ಈ ಎಲ್ಲ ಮಹಾದಾಸೋಹ ಪೀಠಾಧಿಪತಿಗಳ ಪುಣ್ಯ ಸಮಾಧಿಯ ಗದ್ದು-ಗೆಗಳು ಶರಬಸವೇಶ್ವರರ ಮಹಾ ಸಮಾಧಿಯ ಎದುರುಗಡೆ ಆಗಿವೆ.

ಜನತೆಯಲ್ಲಿ ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ ಜಾಗೃತಿ ಮೂಡಿಸುವ ಹಾಗೂ ರಾಷ್ಟ್ರೀಯ ಮನೋಭಾವನೆ ಬೆಳೆಸುವ ಉದ್ದೇಶದಿಂದ ಕ್ರಿ ವ. ೧೯೧೮ರಲ್ಲಿ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ಸ್ಥಾಪಿಸಿ ಆ ಮೂಲಕ ಹಲವಾರು ವಿದ್ಯಾ ಸಂಸ್ಥೆ ಪ್ರಾರಭಿಸುವುದರ ಜೊತೆಗೆ ಇಂಗ್ಲೀಷ ಹಾಗೂ ಉರ್ದು ಭಾಷೆಗಳು ಆಡಳಿತ ಮತ್ತು ಶಿಕ್ಷಣ ಮಾಧ್ಯಮಗಳಾಗಿದ್ದ ಕಾಲದಲ್ಲಿ ೧೯೩೪ರಲ್ಲಿಯೇ ಈ ಭಾಗದಲ್ಲಿ ಪ್ರಪ್ರಥಮ ಹೆಣ್ಣುಮಕ್ಕಳ ಪ್ರಪ್ರಥಮ ಕನ್ನಡ ಶಾಲೆ ಪ್ರಾರಂಭಿಸಿದ ಪೂಜ್ಯ ದೊಡ್ಡಪ್ಪ ಅಪ್ಪ ಅವರು ಮೊದಲಿಗರೆನ್ನಿಸಿಕೊಂಡರೆ, ಗುಲ್ಬರ್ಗಾ-

ನಲ್ಲಿ ಸ್ನಾತಕೋತ್ತರ ಕೇಂದ್ರ ಹಾಗೂ ವಿಶ್ವವಿದ್ಯಾಲಯವಾಗುವಲ್ಲಿ ಶ್ರಮಿಸಿದ ಪೂಜ್ಯ ಬಸವಪ್ಪ ಅಪ್ಪ ಅವರು ಮೊದಲಿಗರೆನ್ನಿಸಿಕೊಂಡಿದ್ದಾರೆ. ಭಾರತ ಕೃಷಿಕರ ದೇಶ. ಅವರ ವಾರದ ಜನಪದ ರಜೆ ಸೋಮವಾರ. ಬ್ರಿಟಿಷರ 'ರವಿವಾರ', ನಿಜಾಮರ 'ಶುಕ್ರವಾರ' ಈ ವಾರದ ರಜೆಗಳ ಬದಲಾಗಿ ಗುಲಾಮಗಿರಿಗೆ ವಿರೋಧವಾಗಿ ತಮ್ಮ ವಿದ್ಯಾಸಂಸ್ಥೆಗಳಿಗೆ 'ಸೋಮವಾರ' ವನ್ನು ವಾರದ ರಜೆಯಾಗಿ ೧೯೩೪ರಿಂದ ರೂಢಿಯಲ್ಲಿ ತಂದಿದ್ದಾರೆ. ಸ್ತ್ರೀ ಶಿಕ್ಷಣ, ಕನ್ನಡ ಭಾಷೆ ಬೆಳವಣಿಗೆ, ರಾಷ್ಟ್ರ ಪ್ರೇಮಕ್ಕೆ ಶಕ್ತಿಯನ್ನು, ಸ್ಫೂರ್ತಿಯನ್ನು ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ತಂದುಕೊಟ್ಟವರಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರು ಮೊದಲಿಗರು, ಎರಡು ಕನ್ನಡ ಸಾಹಿತ್ಯ ಸಮ್ಮೇಳನಗಳ ನೇತೃತ್ವವಹಿಸಿ ಆ ಮೂಲಕ ಜನ ಜಾಗೃತಿಯನ್ನು ಉಂಟು ಮಾಡಿದ ಶ್ರೇಯಸ್ಸು ಶರಣಬಸವೇಶ್ವರ ಸಂಸ್ಥಾನಕ್ಕೆ ಸಲ್ಲುತ್ತದೆ. ಈ ಬಗೆಯ ರಾಷ್ಟ್ರೀಯ ಜನ ಜಾಗೃತಿಯ ವ್ಯವಸ್ಥೆಯನ್ನು ಸದೆಬಡಿಯಲು ಶರಣಬಸವೇಶ್ವರ ಸಂಸ್ಥಾನದ ಮೇಲೆ ಎರಡು ಸಾರೆ ಹಲ್ಲೆ ನಡೆಯಿತು. ಆದರೆ ಪೂಜ್ಯ ದೊಡ್ಡಪ್ಪ ಅಪ್ಪ ಅವರು ಹಾಗೂ ಇತರ ರಾಷ್ಟ್ರಾಭಿಮಾನಿಗಳು ಆ ಹಲ್ಲೆಯನ್ನು ಧೈರ್ಯವಾಗಿ ಎದುರಿಸಿದರು. ಆ ದಂಗೆಯ ವಿಷಯ ತಿಳಿದ ಮಹಾತ್ಮಾ ಗಾಂಧೀಜಿಯವರು, ಹಲ್ಲೆ ನಡೆದ ಅಲ್ಪ ಕಾಲದಲ್ಲಿಯೇ ೨೪-೪-೧೯೨೨ ರಂದು ಗುಲ್ಬರ್ಗಕ್ಕೆ ಆಗಮಿಸಿ ಶರಣಬಸವೇಶ್ವರ ದಾಸೋಹ ಮಹಾಮನೆಯಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರ ದರ್ಶನಾಶೀರ್ವಾದ ಪಡೆದು ''ಕಾಯಕ'' ದಾಸೋಹ ಅಸ್ಪೃಶ್ಯತೆಯ ಬಗ್ಗೆ ಈಗಾಗಲೇ ಹೆಚ್ಚಿಗೆ ಅರಿತಂಥ ಶರಣರ ಜಾಗೃತ ನಾಡಾದ ಹಾಗೂ ಸರ್ವರ ಜೀವಾತ್ಮದಲ್ಲಿ ಪರಮಾತ್ಮನಿರುವನೆಂದು ಅರಿತ ಈ ಸ್ಥಾನದಲ್ಲಿ ರಾಷ್ಟ್ರ ಪ್ರೇಮದ ಬಗೆಗೆ ಹೆಚ್ಚಿಗೆ ಹೇಳಬೇಕಾಗಿಲ್ಲ. ಹನ್ನೆರಡನೆಯ ಶತಮಾನದಲ್ಲಿ ಶರಣರು ಮಾಡಿದಂಥ ಕೆಲಸವನ್ನು ನಾನು ಅಲ್ಪ-ಸ್ವಲ್ಪ ಮಾಡುತ್ತಿದ್ದೇನೆ. ಆ ಶರಣರ ತತ್ವ ಈಗಿನ ಜನತೆಗೆ ಬೇಕು.'' ಎಂದು ರಾಷ್ಟ್ರೀಯ ಜನ ಜಾಗೃತಿಗಾಗಿ ಶರಣಬಸವೇಶ್ವರ ಸಂಸ್ಥಾನದ ಪ್ರಾಂಗಣದಲ್ಲಿ ಮಹಾತ್ಮಾ ಗಾಂಧೀಜಿಯವರು ಭಾಷಣ ಮಾಡಿದರು. ಅದೇ ಸಮಯದಲ್ಲಿ ಗಾಂಧೀಜಿಯವರ, ಟಿಳಕರ ಸ್ವರಾಜ್ಯ ನಿಧಿಗೆ ಅಪ್ಪ ಅವರು ಧನ ಸಹಾಯ ಮಾಡಿದರು. ಶರಣಬಸವೇಶ್ವರ ಮಹಾದಾಸೋಹ ಸಂಸ್ಥಾನದ ಮೇಲೆ ಹಲ್ಲೆ ನಡೆದ ದಿನಾಂಕಿನಿಂದೇ ಮುಂದ ಹೈದ್ರಾಬಾದ ನಿಜಾಮ ಸಾಮ್ರಾಜ್ಯ ಅಳಿಯಿತೆಂಬುದನ್ನು ನೆನೆಸಿಕೊಳ್ಳಬಹುದು. ಪವಿತ್ರ ಸ್ಥಾನಗಳಿಗೆ, ಹಿರಿಯರಿಗೆ ಕೆಡುಕು ಬಯಸಿದರೆ ಅವಸಾನ ನಿಶ್ಚಿತ.

ಎಂಬತ್ತು ವರ್ಷ ಮಹಾದಾಸೋಹ ಪೀಠಾಧಿಪತಿಗಳಾಗಿ ಮಹಿಮೆಗಳನ್ನು ಮೆರೆದ ಪೂಜ್ಯ ದೊಡ್ಡಪ್ಪ ಅಪ್ಪ ಅವರು ತಮ್ಮ ೮೮ನೆಯ ವಯಸ್ಸಿನಲ್ಲಿ ೧೫-೯-೧೯೮೩ರಂದು ಲಿಂಗೈಕ್ಯರಾದರು. ಆ ದಿನದಂದು ಮೂರು ಲಕ್ಷಕ್ಕಿಂತ ಅಧಿಕ ಜನ ಭಕ್ತಿ ಶ್ರದ್ಧೆಯಿಂದ ಅಂತಿಮ ದರ್ಶನ ಪಡೆದರು. ಇಷ್ಟು ಸಂಖ್ಯೆಯಲ್ಲಿ ಭಾರತದಲ್ಲಿ ಆಧ್ಯಾತ್ಮಿಕ ವ್ಯಕ್ತಿಯ ಅಂತಿಮ ದರ್ಶನಕ್ಕೆ ಸೇರಿದ್ದುದು ಮತ್ತೆಲ್ಲಿಯೂ ಕಂಡು ಬರಲಿಕ್ಕಿಲ್ಲ. ಇದು ಕ್ರೈಸ್ತ ವಿಶ್ವಗುರು ಪೋಪ ಪಾಲರ ಅಂತಿಮ ದೃಶ್ಯವನ್ನು ನೆನಪಿಗೆ ತಂದು ಕೊಡುತ್ತದೆ.

ಪೂಜ್ಯ ದೊಡಪ್ಪ ಅಪ್ಪ ಅವರ ನಂತರ ೧೬-೯-೧೯೮೩ ರಂದು ಈಗಿನ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪ ಅವರು ಎಂಟನೆಯ ಮಹಾದಾಸೋಹ ಪೀಠಾಧಿಪತಿಗಳಾಗಿ ಪೀಠಾರೋಹಣ ಮಾಡಿದರು.

ಡಾ॥ ಎಲ್. ಬಸವರಾಜು ಅವರು ಹೇಳುವಂತೆ-''ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ

ಶ್ರೀ ದೊಡ್ಡಪ್ಪ ಅಪ್ಪನವರ ಜ್ಯೇಷ್ಠ ಪುತ್ರರೇ ಆಗಿ ಅವರ ಮಾನಸ ಪುತ್ರರೂ ಆಗಿರುವರು ನಮ್ಮಲ್ಲಿ ಔದಾರ್ಯವಿದ್ದರೆ ಅವರನ್ನು 'ಧವಳೋತ್ತುಂಗ ಹಿಮಾಲಯದ ತೆಕ್ಕೆಯಲ್ಲಿ ಸೆಲೆಯೊಡೆದ ಮಾನಸ ಸರೋವರಕ್ಕೆ ಹೋಲಿಸಬಹುದು, ದೊಡ್ಡಪ್ಪನವರ ಔನ್ನತ್ಯ ಧವಳಿಮ ಮತ್ತು ಓಜಸ್ಸು, ಶರಣಬಸವಪ್ಪನವರ ಪ್ರಸನ್ನ ವಿಸ್ತಾರದಲ್ಲಿ ಸಮಗ್ರವಾಗಿ ಪ್ರತಿಫಲಿತವಾಗಿವೆ. ಅವರು ಸಾಂಪ್ರದಾಯಿಕ ಧರ್ಮವನ್ನು ಸ್ವಸ್ಥರೂಪದಲ್ಲಿ ಹೊರತಾಗಿ ಎಂದಿಗೂ ಅತಿಶಯಿಸಿದವರೂ ಅಲ್ಲ, ಮೌಢ್ಯಾಚಾರ ರೂಪದಲ್ಲಿ ಹೊರತಾಗಿ ಅಲ್ಲಗಳೆದವರೂ ಅಲ್ಲ. ಭಾರತದ ಪ್ರಪ್ರಥಮ ಸಮತಾವಾದಿಯೆನ್ನಬಹುದಾದ ಕಲ್ಯಾಣ ಬಸವನ ಜೀವನ ಸೂತ್ರದನುಸಾರವಾದ ಒಂದು ಸಾಮೂಹಿಕ ಸಹಕಾರ ಪದ್ಧತಿಯ ಮಹಾ ಪ್ರಯೋಗ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರ ದಾಸೋಹ ಮಹಾಮನೆಯಲ್ಲಿ ನಡೆಯುತ್ತಿದೆಯೆನ್ನಬಹುದು.”

೧೪-೧೧-೧೯೩೫ ರಂದು ಜನಿಸಿದ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪ ಅವರು ಎಂ.ಎ. ತತ್ವಜ್ಞಾನ ಪದವೀಧರರು. ಅವರು ವಿದ್ಯಾರ್ಥಿಯಾಗಿದ್ದ ಸಮಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. ತತ್ವಜ್ಞಾನ ಪಠ್ಯಕ್ರಮದಲ್ಲಿ ವೀರಶೈವ ತತ್ವಜ್ಞಾನವಿರಲಿಲ್ಲ. ಎರಡು ಕೋಟಿ ವೀರಶೈವ ಜನಾಂಗದ ತತ್ವಜ್ಞಾನದ ಅಭ್ಯಾಸದ ಬೇಡಿಕೆ ಇವರು ಇಟ್ಟಾಗ, ಸಮಾಜದ ಅವಶ್ಯಕತೆಯನ್ನು ಪೂರೈಸುವುದು ವಿಶ್ವವಿದ್ಯಾಲಯದ ಕರ್ತವ್ಯವೆಂದರಿತ ಗುಣಗ್ರಾಹಿಗಳಾದ ಅಂದಿನ ಕುಲಪತಿಗಳಾದ ಡಾ॥ ಡಿ. ಸಿ. ಪಾವಟೆಯವರು ತಕ್ಷಣ ಒಪ್ಪಿಕೊಂಡರು. ಎಂ. ಎ. ತತ್ವಜ್ಞಾನದ ಪಠ್ಯಕ್ರಮದಲ್ಲಿ ವೀರಶೈವ ತತ್ವಜ್ಞಾನದ ಅಭ್ಯಾಸ ಭಾರತದಲ್ಲಿ ಪ್ರಪ್ರಥಮವಾಗಿ ಪ್ರಾರಂಭಿಸಿದ ಶ್ರೇಯಸ್ಸು ಈ ಇಬ್ಬರಿಗೆ ಸಲ್ಲುತ್ತದೆ.

ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪವರು ಪೌರ್ವಾತ್ಯ ಹಾಗು ಪಾಶ್ಚಿಮಾತ್ಯ ತತ್ವಜ್ಞಾನಗಳ ಜೊತೆಗೆ ವೀರಶೈವ ತತ್ವಜ್ಞಾನದಲ್ಲಿ ಪ್ರಾವೀಣ್ಯತೆ ಪಡೆದವರು. ಜೊತೆಗೆ ವಚನಸಾಹಿತ್ಯದ ಬದುಕನ್ನು ಜೀವನಕ್ಕೆ ಅಳವಡಿಸಿಕೊಂಡವರು. ಸೃಜನಾತ್ಮಕ ಕಾರ್ಯವಿಧಾನದ ಅರಿವು ವಿದ್ಯಾರ್ಥಿ ದೆಶೆಯಲ್ಲಿಯೇ ಬೆಳೆದುಬಂದಿತ್ತು. ಶಿವಸೂತ್ರ-ನಾರದಸೂತ್ರಗಳು ರಚನೆಗೊಂಡಂತೆ ಇವರು ದಾಸೋಹ ಸೂತ್ರಗಳನ್ನು ರಚಿಸಿ ಆ ಮಹಾಪರಂಪರೆಗೆ ಸೇರಿದವರಾಗಿದ್ದಾರೆ. ಗುರುಸನ್ನಿಧಿಯಿಂದ-ಋಷಿ ಸನ್ನಿಧಿಯಿಂದ ಉಪನಿಷತ್ತುಗಳಾದರೆ, ಮಹಾ ಮಹಿಮರಾದ ಶರಣಬಸವರ, ಪೂಜ್ಯ ದೊಡ್ಡಪ್ಪ ಅಪ್ಪ ಅವರ, ಶರಣ ಸತ್ಸಂಗ ಸನ್ನಿಹಿತದಿಂದ ದಾಸೋಹ ಸೂತ್ರಗಳು ರಚನೆಗೊಂಡಿವೆ. ಅರವಿಂದರ ತತ್ವಜ್ಞಾನ ಭಾರತೀಯ ಅಧ್ಯಾತ್ಮಕ್ಕೆ ಕೊಡುಗೆಯಾದಂತೆ ಇವರ ದಾಸೋಹ ಸೂತ್ರಗಳು ವಿಶ್ವದ ಅಧ್ಯಾತ್ಮಿಕ ಮೌಲ್ಯಗಳಿಗೆ ಕೊಡುಗೆಯಾಗಿವೆ. ಅಂದಿನ ಹೈದ್ರಾಬಾದ ಸಂಸ್ಥಾನದ ನಿಜಾಮ ಆಡಳಿತದ ರಜಾಕಾರ ಹಾವಳಿಯಲ್ಲಿ ಊರು ಬಿಟ್ಟು ಸೊಲ್ಲಾಪೂರಕ್ಕೆ ಹೋದಾಗ ಪ್ರಾಣಾಪಾಯ ಭಯದ ವಾತಾವರಣವಿದ್ದರೂ ಸಹ ಪೂಜ್ಯ ದೊಡ್ಡಪ್ಪ ಅಪ್ಪ ಅವರು ತಮ್ಮ ಮಹಾದಾಸೋಹ ಪೀಠದ ಶ್ರಾವಣಮಾಸದ ವೈಶಿಷ್ಟ್ಯಪೂರ್ಣವಾದ ತ್ರಿಕಾಲ ಗುರುಲಿಂಗ ಜಂಗಮ ಪೂಜೆಗಾಗಿ ಹದಿನಾಲ್ಕು ವರ್ಷದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರನ್ನು ಸೊಲ್ಲಾಪುರದಿಂದ ಗುಲಬರ್ಗಾಕ್ಕೆ ಕಳಿಸಿ ಶರಣಬಸವೇಶ್ವರ ಸಂಸ್ಥಾನದಲ್ಲಿ ಆ ಕಾರ್ಯ ತಡೆಯಿಲ್ಲದೆ ಮುಂದುವರೆಯುವಂತೆ ಮಾಡಿದರು. ಇವರೂ ಸಹ ಯಾವ ಬಗೆಯ ಭೀತಿಗೊಳಗಾಗದೆ ಪೂಜಾ, ಸಂಸ್ಥಾನದ ದಾಸೋಹದ ಕಾರ್ಯ ಮುಂದವರಿಸಿದರು. ಅಂದಿನಿಂದಲೇ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪವರು ಮಹಾದಾಸೋಹ ಪೀಠದ ಶ್ರಾವಣ ಮಾಸದ ವಿಶೇಷ ತ್ರಿಕಾಲ ಗುರುಲಿಂಗ ಜಂಗಮ ಪೂಜೆ ಸಮಾರಂಭವನ್ನು ಈವರೆಗೆ ನೆರವೇರಿಸುತ್ತ ಬಂದಿದ್ದಾರೆ. ಶರಣಬಸವರ ಪರಂಪರೆಯಿಂದ ಪಡೆದ

ಆಧ್ಯಾತ್ಮ ಸಾಧನೆ, ತಪಸ್ಸಿದ್ಧಿಯನ್ನು ಪೂಜ್ಯ ದೊಡ್ಡಪ್ಪ ಅಪ್ಪ ಅವರು ಶರಣಬಸವಪ್ಪ
ಅವರಿಗೆ ಅವರ ಹದಿನಾಲ್ಕನೆಯ ವಯಸ್ಸಿಗೇನೆ ಅಂತಃಕರಣದೊಂದಿಗೆ ಧಾರೆಯೆರೆದು
ಪ್ರಹಿಸಿದರು. ಈ ಅನುಗ್ರಹ ಪಡೆದ ಪೂಜ್ಯ ಶರಣಬಸವಪ್ಪ ಅಪ್ಪ ಅವರು ಸಂಸಾರದಲ್ಲಿ,
ಶ್ರದ್ಧೆಯಿಟ್ಟು, ಸಮಾಜದಲ್ಲಿ ಸಮತಾ ಬುದ್ಧಿಯಿಟ್ಟು, ವಿಶ್ವ ಕುಟುಂಬದಲ್ಲಿ ದೃಷ್ಟಿಯಿಟ್ಟು,
ಶರಣ ಮಾರ್ಗದಲ್ಲಿ ಮುಂದುವರೆದು, ಆ ಶರಣ ಮಾರ್ಗವನ್ನು ಬೆಡಗು ಬಿನ್ನಾಣವಿಲ್ಲದೆ
ಸರಳ ಸ್ಪಷ್ಟವಾಗಿಯೇ ಜನತೆಗೆ ತಿಳಿಯ ಹೇಳುತ್ತಿದ್ದಾರೆ. ಈ ತಿಳಿವಿನ ಅನುಷ್ಠಾನಕ್ಕೆ ತರ-
ಬೇತಿಯ ಕೇಂದ್ರವೆಂಬಂತೆ ತಮ್ಮ ದಾಸೋಹ ಮಹಾಮನೆಯನ್ನು ಪ್ರೀತಿಯ ಮತ್ತು ಪೂಜೆಯ
ಕಾಯಕ ದಾಸೋಹ ಮತ್ತು ಪ್ರಸಾದದ ನೆಲೆವೀಡಾಗಿ ಅಭಿವೃದ್ಧಿ ಪಡೆಸಿದ್ದಾರೆ.

ಏಕ ಕಾಲದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸೆನೇಟ ಹಾಗೂ ಸಿಂಡಿಕೇಟ ಸದಸ್ಯರಾಗಿ, ಗುಲ್ಬರ್ಗಾ ಸ್ನಾತಕೋತ್ತರ ಕೇಂದ್ರ ಸ್ಥಾನಿಕ ಸಮಿತಿಯ ಕಾರ್ಯಾಧ್ಯಕ್ಷರಾಗಿ, ಗುಲ್ಬರ್ಗಾ ವಿಶ್ವ-ವಿದ್ಯಾಲಯದ ಪ್ರಥಮ ಪಂಚವಾರ್ಷಿಕ ಅಭಿವೃದ್ಧಿ ಯೋಜನೆಯ ಪ್ರಮುಖ ವ್ಯಕ್ತಿಗಳಾಗಿ ಶರಣಬಸವೇಶ್ವರ ವಿದ್ಯಾಸಂಸ್ಥೆಗಳ ಅಧ್ಯಕ್ಷರಾಗಿ, ಇಂಜನಿಯರಿಂಗ, ಮೆಡಿಕಲ್ ಕಾಲೇಜ್ ಮೊದಲಾದ ಹಲವಾರು ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವ ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ, ಅಖಿಲಭಾರತ ವೀರಶೈವ ಯುವ ಜನ ಸಮ್ಮೇಳನದ ಅಧ್ಯಕ್ಷರಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಬಸವ ಪೀಠದ ಗೌರವ ಸದಸ್ಯರಾಗಿ, ಬಸವ ಸಮಿತಿ ಟ್ರಸ್ಟಿನ ಸದಸ್ಯರಾಗಿ, ಆರನೆಯ ಸರ್ವ ಧರ್ಮ ಸಮ್ಮೇಳನದ ಅಧ್ಯಕ್ಷರಾಗಿ, ಅಂತರ ರಾಷ್ಟ್ರೀಯ ಶಸ್ತ್ರ ವೈದ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ, ಲಾಯನ್ಸ್—ರೋಟರಿ ಕ್ಲಬ್ ಮಾದರಿಯ 'ಕಾಯಕ ಇಂಟರ ನ್ಯಾಷನಲ್' ಎಂಬ ಸೇವಾ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ, ಅಖಿಲ ಭಾರತ ೫೮ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಗೌರವಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ಮತ್ತು ನಿರ್ವಹಿಸುತ್ತಿರುವ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಗುಲಬರ್ಗಾ ವಿಶ್ವ ವಿದ್ಯಾಲಯ ದ ಎಲ್ಲ ಶೈಕ್ಷಣಿಕ ವಿಭಾಗಗಲ್ಲಿ ಸ್ನಾತಕೋತ್ತರ ಅಧ್ಯಯನ ನಡೆಯ ಬೇಕೆಂದು ಇಚ್ಛಿಸಿ ಮೆಡಿಕಲ್ ಮತ್ತು ಇಂಜನಿಯರಿಂಗ್ ಕೋರ್ಸಗಳಲ್ಲಿಯೂ ಸ್ನಾತಕೋತ್ತ ಅಧ್ಯಯನದ ಪ್ರಾರಂ-ಭಕ್ಕೆ ಚಾಲನೆ ಕೊಟ್ಟರು.

ಹೀಗೆ ಗುಲಬರ್ಗಾ ವಿಶ್ವವಿದ್ಯಾಲಯ, ಶರಣಬಸವೇಶ್ವರ ವಿದ್ಯಾಸಂಸ್ಥೆಗಳು, ಹೈದ್ರಾ-ಬಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳ ಅಭಿವೃದ್ಧಿಗೆ ಏಕಕಾಲದಲ್ಲಿ ಈ ಭಾಗದ ಸಮಗ್ರ ಶಿಕ್ಷಣಾಭಿ-ವೃದ್ಧಿಗೆ ಸೂತ್ರಧಾರರಾಗಿ ಕಾರ್ಯನಿರ್ವಹಿಸುವ ಸದಾವಕಾಶ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ-ರವರಿಗೆ ಸಂದಿತು. ಮಹಾದಾಸೋಹ ಪೀಠಾಧಿಪತಿಗಳಾಗಿ, ವಿವಿಧ ಶಿಕ್ಷಣಸಂಸ್ಥೆಗಳ ಅಧ್ಯಕ್ಷರಾಗಿ ಕೋಟಿ ಕೋಟಿ ಜನಾಂಗಕ್ಕೆ ಶಿಕ್ಷಣ ಹಾಗೂ ಅಧ್ಯಾತ್ಮದ ಪವಿತ್ರ ಸಂಸ್ಥೆಯ ಸ್ವರೂಪರೇ ಇವ-ರಾಗಿದ್ದಾರೆ. ಶಿಕ್ಷಣ, ಸಂಸ್ಕೃತಿ, ಕಲೆ ಮೊದಲಾದ ಕ್ಷೇತ್ರಗಳಲ್ಲಿ ಸರಕಾರ ಇಲ್ಲವೆ ಇತರ ಸಂಸ್ಥೆಗಳು ಮಾಡುವದೊತ್ತಟ್ಟಿಗಿರಲಿ, ಆ ದಿಶೆಯಲ್ಲಿ ವಿಚಾರ ಮಾಡುವ ಮೊದಲೇ ಇವರು ತಮ್ಮ ವಿದ್ಯಾ-ಸಂಸ್ಥೆಗಳಲ್ಲಿ ಹೊಸ ಹೊಸ ಯೋಜನೆಗಳನ್ನು ಕೈಕೊಳ್ಳುವ ಮತ್ತು ಹೊಸ ಆಹ್ವಾನಗಳನ್ನು ಎದುರಿಸುವ ಸಾಹಸವನ್ನು ಯಾವಾಗಲೂ ಮಾಡಿದ್ದನ್ನು ಕಾಣಬಹುದಾಗಿದೆ. ಧರ್ಮ, ಅರ್ಥ, ಸಮಾಜ, ಶಿಕ್ಷಣ, ಸಾಹಿತ್ಯ, ಚಿತ್ರಕಲೆ, ಶಿಲ್ಪ, ಸಂಗೀತ ಮೊದಲಾಗಿ ಜೀವನದ ಪ್ರತಿ ರಂಗದಲ್ಲಿ-ಯೂ ದಾಸೋಹ ಧರ್ಮವಿದೆಯೆಂದು ಹೇಳುವ ಪೂಜ್ಯ 'ಅಪ್ಪ' ಅವರ ಆಶೀರ್ವಾದ ಮತ್ತು ಪ್ರತಿಭಾಪೂರ್ಣ ಮಾರ್ಗದರ್ಶನದಲ್ಲಿ ಶರಣಬಸವೇಶ್ವರ ವಿದ್ಯಾಸಂಸ್ಥೆಯ ಮೂಲಕ ಆರು

ವಿದ್ಯಾಲಯಗಳು. ಎರಡು ಪ್ರೌಢಶಾಲೆಗಳು. ಆಂಗ್ಲಮಾಧ್ಯಮದ ವಸತಿ ನಿಲಯ-ದ ರೆಸಿಡೆನ್ಸಿಯಲ್ ಪ್ರೌಢಶಾಲೆ, ಮೂರು ಪ್ರಾಥಮಿಕ ಶಾಲೆಗಳು, ಗ್ರಂಥ ವಿಶ್ವವಿದ್ಯಾಲಯ ಮುದ್ರಣಾಲಯ, ಅನುಭವ ಮಂಟಪ, ಕಾಯಕ ಇಂಟರ್‌ನ್ಯಾಶನಲ್ ಮೊದಲಾದವುಗಳು ಕಾರ್ಯನಿರ್ವಹಿಸುತ್ತಿದ್ದು, ಸುಮಾರು ಹನ್ನೆರಡು ಸಾವಿರ ವಿದ್ಯಾರ್ಥಿಗಳು ಅಭ್ಯಾಸ ಮಾಡು-ತ್ತಿದ್ದಾರೆ. ದಕ್ಷಿಣ ಭಾರತದಲ್ಲಿಯೇ ಪ್ರಪ್ರಥಮವಾಗಿ ಖಾಸಗಿ ಶಿಕ್ಷಣ ಸಂಸ್ಥೆಯ ವತಿಯಿಂದ ಪ್ರಾರಂಭಗೊಂಡ ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ವಿಭಾಗ, ಬಿಜಿನೆಸ್ ಮ್ಯಾನೇಜಮೆಂಟ ಕೋರ್ಸ. ಪದವಿ ಮಟ್ಟದಲ್ಲಿ ಸಂಗೀತ, ಚಿತ್ರಕಲೆ, ಎಲೆಕ್ಟ್ರಾನಿಕ್ಸ್, ಕಂಪ್ಯೂಟರ್ ಸಾಯನ್ಸ್, ರೂರಲ್ ಬ್ಯಾಂಕಿಂಗ. ಕಮರ್ಶಿಯಲ್ ಆರ್ಟ, ಹೋಮ್ ಆರ್ಟ ಹಾಗೂ ಹಲವಾರು ವೃತ್ತಿಪರ ಶಿಕ್ಷಣ ಸಂಸ್ಥೆಗಳು ಪೂಜ್ಯ 'ಅಪ್ಪ' ಅವರ ದೂರದೃಷ್ಟಿಯ ಪ್ರತಿಫಲಗಳು. ಮಾಂಟೆಸ್ಸರಿ ಶಿಕ್ಷಣದಿಂದ ಸ್ನಾತಕೋತ್ತರ ಪದವಿವರೆಗೆ ಶಿಕ್ಷಣ ನೀಡುವ ಹಲವಾರು ಶಿಕ್ಷಣ ಸಂಸ್ಥೆಗಳನ್ನು ಹೊಂದಿರುವ ಶರಣಬಸವೇಶ್ವರ ವಿದ್ಯಾಸಂಸ್ಥೆ ವಿಶ್ವವಿದ್ಯಾಲಯ ಮಾದರಿಯಲ್ಲಿ ಬೆಳೆದು ಬಂದಿದೆ. ಅನುದಾನ ರಹಿತ ಶರಣಬಸವೇಶ್ವರ ರೆಸಿಡೆನ್ಸಿಯಲ್ ಪ್ರೌಢಶಾಲೆಯೊಂದಕ್ಕೇ ಪ್ರತಿ ವರ್ಷ ಐವತ್ತು ಲಕ್ಷ ಹಣ ವೆಚ್ಚವಾಗುತ್ತಿದೆ. 'ಅಪ್ಪ' ಅವರ ವಿಚಾರ ಪ್ರಣಾಳಿಕೆಯೇ ಇದಕ್ಕೆ ಮೂಲ. ಜನತೆಗೆ ಬೇಕಾದ ಅವಶ್ಯಕವಾದ, ಒಳಿತಾದ ಕಾರ್ಯವನ್ನು ಇವರು ಯಾವಾಗಲೂ ಮಾಡುತ್ತಾಬಂದಿದ್ದಾರೆ.

ಭಾರತದಲ್ಲಿ ಅನೇಕಾನೇಕ ಶಿಕ್ಷಣ ಸಂಸ್ಥೆಗಳು ಬೆಳೆದುಬಂದಿವೆಯಾದರೂ ಅವುಗಳಿಗೆ ತಮ್ಮದೆ ಆದ ಶಿಕ್ಷಣ ತತ್ವಜ್ಞಾನವಿಲ್ಲ. ಆದರೆ ರವೀಂದ್ರನಾಥ ಠಾಕುರರ ಶಾಂತಿನಿಕೇತನ, ಪಾಂಡಿಚೇರಿಯ ಅರವಿಂದಾಶ್ರಮಗಳು ತಮ್ಮ ಶಿಕ್ಷಣ ತತ್ವಜ್ಞಾನವನ್ನು ತಮ್ಮ ವಿದ್ಯಾಸಂಸ್ಥೆ-ಗಳಲ್ಲಿ ಅಳವಡಿಸಿವೆ. ಅದರಂತೆ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪರವರು ಕೇವಲ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದೆ, ಅವುಗಳಿಗೆ ತಮ್ಮದೇ ಆದ ಶಿಕ್ಷಣ ತತ್ವಜ್ಞಾನ ಅಳವಡಿಸಿದ್ದಾರೆ. ಕರ್ನಾಟಕದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳು ಬೆಳೆದಂತೆ ಭಾರತದ ಬೇರಾವ ಪ್ರಾಂತಗಳಲ್ಲಿ ಬೆಳೆದುಬಂದಿಲ್ಲ. ಇದಕ್ಕೆ ಕಾರಣ ಶರಣರ ಕಾಯಕ-ದಾಸೋಹ ತತ್ವಗಳು ಶೈಕ್ಷಣಿಕ ಸಂಸ್ಥೆಗಳ ರೂಪತಾಳಿ ಬಂದದ್ದು ಕಂಡುಬರುತ್ತದೆ, ಈ ದಾಸೋಹ ತತ್ವದ ಇತಿಹಾಸ ಕಾಣಬಯಸುವವರಿಗೆ ಹನ್ನೆರಡನೆಯ ಶತಮಾನದ ಅನುಭಾವಿ ಶರಣರ ಅನುಭವ ಮಂಟಪ ದೃಗ್ಗೋಚರವಾಗುತ್ತದೆ. ಅಂದಿನ ಗ್ರೀಕ್ ದೇಶದ ಅಕಾಡಮಿಯನ್ನು ಹೋಲುವ ಅನುಭವ ಮಂಟಪವು ಆಧ್ಯಾತ್ಮಿಕ ಅಕಾಡೆಮಿ, ಪ್ರಜಾಪ್ರಭುತ್ವ ಮಾದರಿಯ ಧಾರ್ಮಿಕ ಪಾರ್ಲಿಮೆಂಟು. ಶೈಕ್ಷಣಿಕ ಸಾಮಾಜಿಕ ಆಧ್ಯಾತ್ಮಿಕ, ತಾತ್ವಿಕ, ಉದಾತ್ತ ಮೌಲ್ಯಗಳನ್ನು ರೂಪಿಸುವ ಕಮ್ಮಟ. ಅಂದಿನ ಆ ಶರಣ ಸಂಸ್ಕೃತಿಯ ಮೂಲವು ಗುಪ್ತಗಾಮಿನಿಯಾಗಿ ಹರಿದುಬಂದು ದಾಸೋಹಂಭಾವದ ಬಯಕೆ-ಮಾತ್ರ ಈ ಇಪ್ಪತ್ತನೆಯ ಶತಮಾನದಲ್ಲಿ ಶಿಕ್ಷಣ ಸಂಸ್ಥೆಗಳ ರೂಪದಲ್ಲಿ ಮೈದಾಳಿ ನಿಂತಿರು-ವುದನ್ನು ಗಮನಿಸಬಹುದು.

ಶರಣಬಸವೇಶ್ವರ ಸಂಸ್ಥಾನದ ಆಶ್ರಯದಲ್ಲಿ ಕ್ರಿ. ಶ. ೧೯೭೮ ಮತ್ತು ೧೯೮೪ ರಲ್ಲಿ ಎರಡು ಸಾರೆ ಅಖಿಲಭಾರತ ಸಾಹಿತ್ಯ ಸಮ್ಮೇಲನ ನಡೆದಿದೆ ಅಖಿಲ ಕರ್ನಾಟಕ ಜಾನಪದ ಸಮ್ಮೇಲನ, ವಿಜ್ಞಾನ ಸಮ್ಮೇಲನ, ವಚನ ವಾಙ್ಮಯ ದರ್ಶನ ಮೊದಲಾದ ಹಲವಾರು ಸಾಹಿತ್ಯಿಕ- ಧಾರ್ಮಿಕ ಸಮ್ಮೇಲನಗಳು, ಪ್ರತಿವರ್ಷ ಶ್ರಾವಣ ಮಾಸದಲ್ಲಿ ೨೦--೩೦ ಜನ ವಿದ್ವಾಂಸರ ಉಪನ್ಯಾಸಗಳು ಮಹಾದಾಸೋಹ ಯಾತ್ರಾ ಸಮಯದಲ್ಲಿ ವಿದ್ವನ್ಮಣಿಗಳ ವಿಶೇಷ ಉಪನ್ಯಾಸಗಳು ಹಾಗೂ ಅವುಗಳ ಪ್ರಕಟಣೆ, ಸಾಹಿತ್ಯ, ಸಂಸ್ಕೃತಿ, ದರ್ಶನ ಕುರಿತಾದ ಕನ್ನಡ-

ಇಂಗ್ಲೀಷ ಭಾಷೆಯಲ್ಲಿ ಶಿಕ್ಷಣ ತರಬೇತಿ, ಪ್ರಖ್ಯಾತ ಬರಹಗಾರರ ಗ್ರಂಥ ಪ್ರಕಟಣೆ ಕಾರ್ಯ ಚಟುವಟಿಕೆಗಳು ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರ ಸೂಕ್ತಮಾರ್ಗದಲ್ಲಿ ನಡೆಯುತ್ತಿವೆ. ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ॥ ಆರ್. ಸಿ. ಹಿರೇಮಠ ಅವರು "ವಿಶ್ವವಿದ್ಯಾಲಯದಲ್ಲಿ ನಡೆಯಲಾರದಷ್ಟು ಸಾಹಿತ್ಯಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಕಾರ್ಯ ಚಟುವಟಿಕೆಗಳು ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರ ಮಹಾದಾಸೋಹ ಪೀಠದಲ್ಲಿ ನಡೆಯುತ್ತವೆ." ಎಂದು ಹೇಳಿದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಶರಣಬಸವೇಶ್ವರ ಮಹಾದಾಸೋಹ ಪೀಠಕ್ಕೆ ಸಂದರ್ಶನವಿತ್ತು, ಪೀಠಾಧಿಪತಿಗಳಿಂದ ಆಶೀರ್ವಾದ ಪಡೆದ ಗಣ್ಯರಲ್ಲಿ ರಾಷ್ಟ್ರಪಿತ ಮಹಾತ್ಮಾಗಾಂಧೀಜಿ, ರಾಷ್ಟ್ರಪತಿಗಳಾದ ಡಾ॥ ಎಸ್. ರಾಧಾಕೃಷ್ಣನ್. ಡಾ॥ ವಿ. ವಿ. ಗಿರಿ, ಶ್ರೀ ಗ್ಯಾನಿ ಜೇಲ್‌ಸಿಂಗ್, ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅಲ್ಲದೆ ಕರ್ನಾಟಕ ರಾಷ್ಟ್ರೀಯ-ಅಂತರ ರಾಷ್ಟ್ರೀಯ ನಾಯಕರು, ದಾರ್ಶನಿಕರು, ಹಲವಾರು ಮಠ-ಪೀಠಗಳ ಅಧಿಪತಿಗಳು, ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿ ಬಸವ-ಶರಣಬಸವ ಸಂಪ್ರದಾಯಕ್ಕೆ ಸೇರಿದ ಸುಮಾರು ನಾಲ್ಕು ಕೋಟಿ ಭಕ್ತಶಿರೋಮಣಿಗಳಾಗಿದ್ದಾರೆ. ಕನ್ನಡದಲ್ಲಿದ್ದ ಶರಣಬಸವ ಪುರಾಣವನ್ನು ತೆಲಗು-ಮರಾಠಿ ಭಾಷೆಗಳಲ್ಲಿ ಬರೆಯಿಸಿ ಪ್ರಕಟಿಸಿದುದರಿಂದ ಕರ್ನಾಟಕ ಅಷ್ಟೇ ಅಲ್ಲದೆ ಆಂಧ್ರ-ಮಹಾರಾಷ್ಟ್ರಗಳಲ್ಲಿ ಕೂಡ ಒಟ್ಟು ಸುಮಾರು ಐದು ನೂರಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಶರಣಬಸವೇಶ್ವರ ಪುರಾಣ ಪ್ರವಚನ ನಡೆಯುತ್ತಿದ್ದು ಜನತೆಯಲ್ಲಿ ಭಕ್ತಿ-ಶ್ರದ್ಧೆ ಹುಟ್ಟುವಂತೆ, ಕಾಯಕ - ದಾಸೋಹಂಭಾವ ಬೆಳೆಯುವಂತೆ, ಜೀವನ ಪ್ರಸಾದಮಯವಾಗುವಂತೆ ಮಾಡಿ 'ಅಪ್ಪ' ಅವರು ಮಹಾದಾಸೋಹಿಯೆನ್ನಿಸಿದ್ದಾರೆ. ಕೆಲವೇ ವರ್ಷಗಳಲ್ಲಿ ೧೦೦೦ ಶರಣಬಸವೇಶ್ವರ ಸಾಂಸ್ಕೃತಿಕ ಕೇಂದ್ರ ಮಾಡುವ ಯೋಜನೆ ಹೊಂದಿದ್ದಾರೆ. ಬಸವಾದಿ ಪ್ರಮಥರ ನಂತರ ಶರಣಬಸವೇಶ್ವರ ಮಹಾದಾಸೋಹ ಸಂಸ್ಥಾನದಲ್ಲಿ ಪೂಜ್ಯ 'ಅಪ್ಪ' ಅವರ ಘನನೇತೃತ್ವದಲ್ಲಿ ಶಾಸ್ತ್ರೋಕ್ತವಾಗಿ ಐದು ತರಹದ ಕಲ್ಪಭಸ್ಮವನ್ನು ಸಿದ್ಧಗೊಳಿಸಿದ ಕಾರ್ಯ ಏಕಮಾತ್ರ ಐತಿಹಾಸಿಕ ದಾಖಲೆಯಾಗಿದೆ. ಇತ್ತೀಚಿಗೆ ಬಿದ್ದ ಭೀಕರ ಬರಗಾಲ ಸಮಯದಲ್ಲಿ (ಕ್ರಿ. ಶ. ೧೯೮೪) ಅಪಾರ ಸಂಖ್ಯೆಯ ದನಕರುಗಳಿಗೆ ತಮ್ಮ ಹೊಲ ಸಂಪೂರ್ಣ ಬೆಳೆಯನ್ನೇ ಆಹಾರವಾಗಿ ಒದಗಿಸಿ ಸಂರಕ್ಷಿಸಿದ 'ಅಪ್ಪ' ಅವರ ದಯಾಗುಣ ಕೇವಲ ಮಾನವರಲ್ಲಷ್ಟೇ ಜಂಗಮತ್ವ ಕಾಣದೆ, ಪಶು-ಪಕ್ಷಿಗಳಲ್ಲಿಯೂ ಜಂಗಮತ್ವವನ್ನು ಕಂಡದ್ದು ತಿಳಿದು ಬರುತ್ತದೆ ಇದು ಮೂಲ ಶರಣರ ದಯಾಗುಣವನ್ನು ನೆನಪಿಗೆ ತಂದುಕೊಡುತ್ತದೆ. ದಾಸೋಹ ತತ್ವದ ಬೆಳವಣಿಗೆ ಅರವತ್ತು ಪುರಾತನರಿಂದ ಆರಂಭಗೊಂಡು ಹನ್ನೆರಡನೆಯ ಶತಮಾನದಲ್ಲಿ ಒಂದು ತ್ವತ್ವಕ್ಕೆ ಸೇರಿದವರಾದ ಬಸವಾದಿ ಶರಣರು ಸಾರಿದ ಶರಣಧರ್ಮ-ದಾಸೋಹಧರ್ಮವನ್ನು ಎಲ್ಲ ಬಗೆಯ ಜನಾಂಗಕ್ಕೂ ಶರಣಬಸವರು ಸಾರ್ವತ್ರಿಕಗೊಳಿಸಿದರೆಂಬುದಕ್ಕೆ ಅವರ ಮಹಾದಾಸೋಹ ನಿರಂತರವಾಗಿ ಇಂದಿಗೂ ಮುಂದುವರಿದುದೇ ನಿದರ್ಶನವಾಗಿದೆ. ಜೈನ ಮೊದಲಾದ ಧರ್ಮಗಳಿಗೆ ಅಹಿಂಸಾ ತತ್ವವು ಪುರಾತನ ತತ್ವವಾದರೂ ಗಾಂಧೀಜಿಯವರ ಜೀವನದಲ್ಲಿ ಮತ್ತು ಅವರ ತತ್ವಗಳಲ್ಲಿ ಅದು ಸೇರಿವಿಶ್ವವ್ಯಾಪಿತತ್ವವಾಗಿ ಅದಕ್ಕೆ ಅಂತರ ರಾಷ್ಟ್ರೀಯ ಮನ್ನಣೆ ದೊರೆತು ಜಗದ ಶ್ರೇಯೋಭಿವೃದ್ಧಿ ಯಾವ ರೀತಿ ಆಗುತ್ತಿರುವುದೋ ಅದೇ ರೀತಿ ದಾಸೋಹ ತತ್ವ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರಿಂದ ಕೇವಲ ವೀರಶೈವರಿಗಷ್ಟೇ ಆಗಿ ಉಳಿಯದೆ, ವಿಶ್ವಮಾನವೀಯ ವೈಶಾಲ್ಯವನ್ನು ಪಡೆದು ವಿಶ್ವಜನಾಂಗಕ್ಕೆ-

...ಗೆ ಮಹಾನ್ ಕೊಡುಗೆಯಾಗಿ ನೀಡಲ್ಪಟ್ಟಿದೆ. ರಾಷ್ಟ್ರೀಯ ಭಾವೈಕ್ಯ ರೂಪಿಸುವಲ್ಲಿ ...ದ ಪವಿತ್ರತಾಣವಾಗಿರುವ ಶರಣಬಸವೇಶ್ವರ ಮಹಾದಾಸೋಹ ಸಂಸ್ಥಾನದಲ್ಲಿ ಮುಸ್ಲಿಮರನ್ನೊಳಗೊಂಡು ಎಲ್ಲ ಜನಾಂಗದವರಿಗೆ ದರ್ಶನ-ಪ್ರಸಾದಕ್ಕೆ ಮುಕ್ತ ಅವಕಾಶವಿದೆ. ಜನೈಕ್ಯಮತ-ಭಾವೈಕ್ಯದ ಪ್ರತೀಕವಾಗಿ ಗುಲಬರ್ಗಾ ಮಹಾನಗರ ಪಾಲಿಕೆಯ 'ಲಾಂಛನ'ದಲ್ಲಿ ಈ ಭಾವೈಕ್ಯದ ಸಂಕೇತ ರೂಪುಗೊಂಡಿರುವುದನ್ನು ಕಾಣಬಹುದು.

ಶರಣಬಸವೇಶ್ವರ ಮಹಾಸಮಾಧಿ ಹಾಗೂ ದಾಸೋಹ ಮಹಾಮನೆಯ ವಿಸ್ತೃತ ಪ್ರಾಂಗಣದಲ್ಲಿ ಕಾಯಕ ನಿಷ್ಠೆ ಶೈಕ್ಷಣಿಕ-ಆಧ್ಯಾತ್ಮಿಕ ಪವಿತ್ರವಾತಾವರಣ ನಿರ್ಮಾಣಗೊಳ್ಳುವಂತೆ ಮಾಡಿದ್ದಾರೆ. ಅಧ್ಯಾತ್ಮದಲ್ಲಿ ಶರಣಬಸವರು ಕಂಡಂತೆ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾ ಅಧಿದೇವತೆ ಕಾಣುವಂತೆ ಮಾಡಿದ್ದಾರೆ.

ಶರಣಬಸವೇಶ್ವರ ಮಹಾಸಮಾಧಿ ಹಾಗೂ ಅವರ ಮೇಲಿನ ಗೋಪುರ ನಿರ್ಮಾಣ ಕಾರ್ಯ ದ್ವಿತೀಯ ಪೀಠಾಧಿಪತಿಗಳಾದ ಮೊದಲ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಶರಣರಿಂದ ಆರಂಭಗೊಂಡು ಮೇಲ್ಛಾವಣಿಯವರೆಗೆ, ಆಮೇಲೆ ತೃತೀಯ ಅಧಿಪತಿಗಳಾದ ಎರಡನೆಯ ಪೂಜ್ಯ ಶರಣಬಸವಪ್ಪ ಅವರ ಕಾಲದಲ್ಲಿ ಪ್ರಾಂಗಣ, ಗೋಪುರ ನಿರ್ಮಾಣ ಕಾರ್ಯ ಹಾಗೂ ಮೊದಲ ದೊಡ್ಡಪ್ಪ ಶರಣರ ಸಮಾಧಿ ಕಾರ್ಯ ಪೂರ್ಣಗೊಂಡಿತು. ಉಳಿದ ಕೆಳಗಿನ ಕಾರ್ಯ ಏಳನೆಯ ಪೀಠಾಧಿಪತಿ ಲಿಂಗೈಕ್ಯ ಪೂಜ್ಯ ದೊಡ್ಡಪ್ಪ ಅಪ್ಪ ಅವರ ಪ್ರಾರಂಭಾವಧಿಯಲ್ಲಿ ಮುಗಿಯಿತು. ಈಗಿನ ಎಂಟನೆಯ ಪೀಠಾಧಿಪತಿಗಳಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ ಅವರು ಗೋಪುರದ ಕಾರ್ಯ ಕೈಗೆತ್ತಿಕೊಂಡು ಮೂರು ಹಂತದ ಗೋಪುರವನ್ನು ಐದು ಹಂತಗಳಾಗಿಸಿ ಇನ್ನಷ್ಟು ವಿಸ್ತೃತವಾಗಿ, ಕಲಾತ್ಮಕವಾಗಿ ರೂಪುಗೊಳ್ಳುವಂತೆ ಇಡೀ ಗೋಪುರವನ್ನೇ ನವೀಕರಣಗೊಳಿಸಿದರು. ಮಹಾದ್ವಾರ ರಚನಾಕಾರ್ಯದ ಯೋಜನೆಯ ಪೂರ್ವಭಾವಿಯಾಗಿ ಈಗಾಗಲೇ ವಿಸ್ತಾರವಾದ ಸಿಮೆಂಟ್ ಮಾರ್ಗ ರಚನೆಗೊಂಡಿದೆ. ಇಷ್ಟೊಂದು ವಿಸ್ತಾರವಾದ ಪ್ರಾಂಗಣ ಇತರ ಪವಿತ್ರ ಕ್ಷೇತ್ರಗಳಲ್ಲಿ ಇರುವುದು ಅಪರೂಪ ಈ ವಿಸ್ತೃತ ಬಯಲಿನ ಸದುಪಯೋಗದ ವಿಶೇಷ ಯೋಜನೆ ರೂಪುಗೊಳ್ಳಲಿದೆ. ಶರಣರ ಮಹಾಸಮಾಧಿಯ ಮೇಲಿನ ಶಿಖರದ ನೋಟದಿಂದ ದಾಸೋಹಂಭಾವದ ಭಕ್ತಿ ಮೂಡಿಬರುವಂತೆ ಪ್ರಾಂಗಣದಲ್ಲಿ ಪ್ರವೇಶ ಮಾಡಿದೊಡನೆ ಶೈಕ್ಷಣಿಕ ಸಂಸ್ಥೆಗಳಲ್ಲಿ ಸಾಹಿತ್ಯ–ಸಂಸ್ಕೃತಿ ಮೌಲ್ಯಗಳ ಪವಿತ್ರಸಂಪನ್ನತೆ ನಿರ್ಮಾಣಗೊಳ್ಳಬೇಕು, ಸಾಧನೆ ಸಿದ್ಧಿ ಗೊಳ್ಳಬೇಕೆಂಬುದು 'ಅಪ್ಪ' ಅವರ ಸದಾಶಯ. ಎಲ್ಲ ದಂಪತಿಗಳು, ಪ್ರಪಂಚ ಹಿಡಿದು ಪಾರಮಾರ್ಥ ಹೊಂದಬೇಕೆಂಬ ಸದಿಚ್ಛೆ ಹೊಂದಿದ 'ಅಪ್ಪ' ಅವರು ಪ್ರತಿಯೊಂದು ಮನೆಯೂ ದಾಸೋಹ ಮಂದಿರವಾಗಬೇಕೆಂಬ ಅಭಿಲಾಷೆ ಹೊಂದಿದ್ದಾರೆ. ಪ್ರತಿವರ್ಷ ಫಾಲ್ಗುಣವದ್ಯ ಪಂಚಮಿಯೆಂದು ಶರಣಬಸವೇಶ್ವರರ ಪುಣ್ಯತಿಥಿಯ ನಿಮಿತ್ತ ನಡೆಯುವ ಮಹಾದಾಸೋಹ ಯಾತ್ರಾಮಹೋತ್ಸವದಲ್ಲಿ ಸುಮಾರು ನಾಲ್ಕೈದು ಲಕ್ಷ ಭಕ್ತರು ರಥೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿ, ಪೀಠಾಧಿಪತಿಗಳ ದರ್ಶನಾಶೀರ್ವಾದ ಪಡೆದು ಅವರು ನೀಡಿದ ಸಂದೇಶ ಸ್ವೀಕರಿಸಿ ಪುನೀತರಾಗುತ್ತಾರೆ ಭಕ್ತನು ಭಕ್ತನಕಾಂಬದು ಸದಾಚಾರ, ಕೂಡಿ ದಾಸೋಹ ಮಾಡಿದಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮದೇವ ಎಂಬಂತೆ, ಆ ಸಮಯದಲ್ಲಿ ಸುಮಾರು ಎರಡು ಲಕ್ಷಕ್ಕಿಂತ ಅಧಿಕ ಸಂಖ್ಯೆಯ ಭಕ್ತರು ಶರಣರ ದಾಸೋಹ ಮಹಾಮನೆಯಲ್ಲಿ ಕಾಯಕ - ದಾಸೋಹಂಭಾವದಿಂದ ಪ್ರಸಾದ ಸ್ವೀಕರಿಸಿ ಫಲಸಂತೃಪ್ತಿ ಹೊಂದುತ್ತಾರೆ. ಹಾಗೂ ಆತ್ಮಸಾಕ್ಷಾತ್ಕಾರ ಪಡೆಯುತ್ತಾರೆ. ಇದಲ್ಲದೆ ವರ್ಷಾವಧಿ ನಡೆಯುವ ನಿತ್ಯ ದಾಸೋಹದಲ್ಲಿ ಸುಮಾರು ನಾಲ್ಕೈದು ಲಕ್ಷ ಭಕ್ತರು ಶರಣರ ಪ್ರಸಾದ ಸ್ವೀಕರಿಸಿ ಪುನೀತರಾಗುತ್ತಾರೆ.

**– ಪ್ರೊ. ಆರ್. ಎಲ್. ಬಡಿಗೇರ**
ಎಂ. ಎ. ಬಿ. ಈಡಿ.

